# ಉದಯೋನ್ಮುಖ ಸಾಕ್ಷರತೆ

## ಆರಂಭಿಕ ಸಾಕ್ಷರತಾ ಉಪಕ್ರಮ

## ಟಾಟಾ ಸಮಾಜ ವಿಜ್ಞಾನ ಸಂಸ್ಥೆ, ಹೈದರಾಬಾದ್

## ಅಭ್ಯಾಸ ನಿರತರಿಗಾಗಿ ಸಂಕ್ಷಿಪ್ತ ಸೂಚನೆಗಳು (16)

**2019**

**ಟಾಟಾ ಟ್ರಸ್ಟ್ ಬೆಂಬಲದೊಂದಿಗೆ**

ಈ ಅಭ್ಯಾಸ ನಿರತರ ಸಂಕ್ಷಿಪ್ತ ಸೂಚನೆ ಟಾಟಾ ಸಾಮಾಜಿಕ ವಿಜ್ಞಾನ ಸಂಸ್ಥೆ, ಹೈದರಾಬಾದ್‌ನಲ್ಲಿ (ಅಜೀಮ್ ಪ್ರೇಂಜೀ ಸ್ಕೂಲ್ ಆಫ್. ಎಜುಕೇಷನ್ ಸಂಸ್ಥೆಯಿಂದ ) ನಿರೂಪಿಸಲ್ಪಟ್ಟ ಆರಂಭಿಕ ಸಾಕ್ಷರತಾ ಉಪಕ್ರಮದ ವತಿಯಿಂದ ಹೊರ ತಂದಿರುವ ಸರಣಿಯ ಒಂದು ಭಾಗವಾಗಿದೆ.

## ಉದಯೋನ್ಮುಖ ಸಾಕ್ಷರತೆ

### ಸಂಕ್ಷಿಪ್ತ ವಿವರಣೆ (ಸಂಚಿಕೆ) 1

ಅಗಸ್ಟ್ ತಿಂಗಳ ಒಂದು ಸಾಮಾನ್ಯ ದಿನದ ಬೆಳಿಗ್ಗೆ, ಒಂದನೇ ತರಗತಿಯ ಮಕ್ಕಳೆಲ್ಲ ತಮ್ಮ ತರಗತಿಯ ಕೋಣೆಯ ಮುಂದೆ ಉತ್ಸಾಹ ಭರಿತರಾಗಿ ಸಾಲಾಗಿ ನಿಂತಿದ್ದಾರೆ. ಅವರು ಕುತೂಹಲ ಭರಿತರಾಗಿ ಚಡಪಡಿಸುತ್ತಿದ್ದಾರೆ. ಶಿಕ್ಷಕರು ತರಗತಿಯ ಕೋಣೆಯನ್ನು ಅಣಿಮಾಡಿ ಮುಗಿಸುತ್ತಿದ್ದಾರೆ. ವರ್ಣಮಾಲೆಯ ಪಟಗಳು, ಪದ್ಯಗಳು, ಕಥೆಗಳು ಇರುವ ಚಿತ್ರಪಟಗಳು, ವೇಳಾಪಟ್ಟಿಗಳು ಇವುಗಳಿಂದ ಕೋಣೆಯ ಗೋಡೆಗಳನ್ನು ಅಲಂಕರಿಸಲಾಗಿದೆ. ಒಂದೆಡೆ ಮಕ್ಕಳ ಕೈಕೆಲಸವನ್ನು ಪ್ರದರ್ಶಿಸಿದೆ. ಇನ್ನೊಂದೆಡೆ ಗುಂಪಿನ ಎಲ್ಲಾ 20 ಮಕ್ಕಳ ಹೆಸರನ್ನೂ ಬರೆದಿರುವ ಅಲಂಕಾರಿಕ ಪಟ್ಟಿಯನ್ನು ಇಡಲಾಗಿದೆ.

ಶಿಕ್ಷಕಿಯು ಬೇರೆ ಬೇರೆ ರೀತಿಯ ಕಾಗದಗಳು, ಬಣ್ಣಗಳು ಮತ್ತು ಇತರೆ ಬರೆಯುವ ಸಾಮಗ್ರಿ ಇರುವ ಒಂದು ಡಬ್ಬವನ್ನು **"ಬರೆಯುವ ಕೋಣೆ"** ಎಂದು ಬರೆದಿರುವ ಭಾಗದಲ್ಲಿ ಇಟ್ಟರು. ಈ ಎಲ್ಲಾ ತಯಾರಿ ಮುಗಿಸಿದ ನಂತರ ಆಕೆ ಮಕ್ಕಳನ್ನು ಕೋಣೆಯ ಒಳಗೆ ಸ್ವಾಗತಿಸಿದರು.

ಶಿಕ್ಷಕಿ : ಸೀಮಾ, ಈ ದಿನ ನೀನು ನಮಗೆ ಶಾಲಾ ಚೀಲಗಳನ್ನು ಇಡುವ ಕೋಣೆಯನ್ನು ತೋರಿಸುತ್ತೀಯಾ?

ಸೀಮಾ ಶಾಲಾ ಕೊಠಡಿಯ ಮುಂಭಾಗದಲ್ಲಿ ಎಡಭಾಗಕ್ಕಿರುವ ಮೂಲೆಗೆ ಹೋಗಿ ಅಲ್ಲಿ ಗೋಡೆಯ ಮೇಲಿರುವ ಭಿತ್ತಿ ಪತ್ರದ ಮೇಲೆ ಬರೆದಿರುವ ಅಕ್ಷರಗಳನ್ನು ಬೆರಳಿನಲ್ಲಿ ಅನುಸರಿಸಿ ತೋರಿಸುತ್ತಾ ಹೇಳುತ್ತಾಳೆ

ಸೀಮಾ : "ಚೀಲಗಳ ಕೋಣೆ"

ಶಿಕ್ಷಕಿ : ಶಹಬ್ಬಾಸ್ ! ಸರಿಯಾಗಿ ತೋರಿಸಿದೆ !

ಮಕ್ಕಳು "ಚೀಲಗಳ ಕೋಣೆ" ಎಂದು ಗುರುತಿಸಿರುವ ಜಾಗದಲ್ಲಿ ತಮ್ಮ ಚೀಲಗಳನ್ನು ಇಡುತ್ತಾರೆ ಮತ್ತು ಎಲ್ಲ ಮಕ್ಕಳೂ ವೃತ್ತಾಕಾರವಾಗಿ ನಿಲ್ಲುತ್ತಾರೆ. ಎಲ್ಲರೂ ವೃತ್ತದಲ್ಲಿ ಸೇರಿಕೊಂಡ ಮೇಲೆ ಶಿಕ್ಷಕಿ ಕೇಳುತ್ತಾರೆ "ಬೇರೆ ಕೋಣೆಗಳ ಬಗ್ಗೆ ನಮಗೆ ತಿಳಿಸಲು ಯಾರು ಇಚ್ಛಿಸುತ್ತೀರಿ?"

ಅನೇಕ ಮಕ್ಕಳು ಕೈ ಮೇಲೆತ್ತುತ್ತಾರೆ, ಶಿಕ್ಷಕಿ ಅವರುಗಳ ಹೆಸರನ್ನು ಕರೆಯುತ್ತಾರೆ. ಆ ಬೇರೆ ಬೇರೆ ಮಕ್ಕಳು ಬೇರೆ ಬೇರೆ ಕೋಣೆಯಾಗಿ ವಿಭಾಗಿಸಿರುವ ಮೂಲೆಗಳಿಗೆ ಹೋಗಿ ನಿಲ್ಲುತ್ತಾರೆ. ಮಕ್ಕಳ ಕಣ್ಣಿನ ನೇರಕ್ಕಿರುವಂತೆ ಗೋಡೆಯ ಮೇಲೆ ಹಾಕಿರುವ ಪಟ್ಟಿಯಲ್ಲಿ ಆಯಾ ಕೋಣೆಯ ಹೆಸರನ್ನು ಬರೆಯಲಾಗಿದೆ. ಮಕ್ಕಳು ಕೋಣೆಯ ಹೆಸರನ್ನು ಬೆರಳಿನಲ್ಲಿ ತೋರಿಸುತ್ತಾ ಹೇಳುತ್ತಾರೆ–

---

ಈ ಉದಾಹರಣೆಯನ್ನು ಅಜಮೀರದಲ್ಲಿರುವ "ಆರಂಭಿಕ ಸಾಕ್ಷರತಾ ಸಂಸ್ಥೆ" ಯವರ ಪರಿವೀಕ್ಷಣೆಯ ಆಧಾರದಿಂದ ಅಳವಡಿಸಿಕೊಳ್ಳಲಾಗಿದೆ.

ಮಗು 1 : ಪದ್ಯಗಳ ಕೋಣೆ.

ಮಗು 2 : ಬರೆಯುವ ಕೋಣೆ.

ಮಗು 3 : ಕಥೆಗಳ ಕೋಣೆ.

ಶಿಕ್ಷಕಿ : ಏನು, ಕಥೆಗಳ ಕೋಣೆಯೇ?

ಮಗು ಮತ್ತೊಮ್ಮೆ ಗೋಡೆಯ ಮೇಲಿನ ಪಟ್ಟಿಯನ್ನು ನೋಡಿ ಮೆತ್ತಗೆ ಹೇಳುತ್ತದೆ " ಕಥೆಗಳ ಕೋಣೆ" ಶಿಕ್ಷಕಿಯು ಅಲ್ಲಿ ತೂಗು ಬಿಟ್ಟಿರುವ ಪುಸ್ತಕಗಳ ಗುಚ್ಛದಿಂದ ಒಂದು ಪುಸ್ತಕವನ್ನು ತೆಗೆದುಕೊಂಡು ಪುನಃ ಹೇಳುತ್ತಾರೆ "ಕಥೆಗಳ ಕೋಣೆ?"

ಮಗು ಇದರಿಂದ ಸುಳಿವು ಪಡೆದು ಪುನಃ ಪಟ್ಟಿಯನ್ನು ನೋಡಿ ಹೇಳುತ್ತದೆ "ಪುಸ್ತಕಗಳ ಕೋಣೆ! ಪುಸ್ತಕಗಳ ಕೋಣೆ !." ಹೀಗೆ ಹೇಳುವಾಗ ಮಗು ಪಟ್ಟಿಯ ಮೇಲೆ ಬರೆದಿರುವ ಪದಗಳನ್ನು ಬೆರಳಿನಿಂದ ತೋರಿಸುತ್ತದೆ.

ಈ ಗುಂಪಿನ ಮಕ್ಕಳೆಲ್ಲಾ ಈಗ ಒಂದು ತಿಂಗಳಿನಿಂದ ಒಂದನೇ ತರಗತಿಯಲ್ಲಿ ಕಲಿಯುತ್ತಿದ್ದಾರೆ. ಇವರೆಲ್ಲರೂ ಕಡಿಮೆ ಸಾಕ್ಷರತೆ ಇರುವ ಭಾರತ ದೇಶದ ಗ್ರಾಮೀಣ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರಲ್ಲಿ ಹೆಚ್ಚಿನ ಮಕ್ಕಳು ಶಾಲಾಪೂರ್ವ ತರಗತಿಗಳಿಗೆ ಹೋಗಿರುವುದಿಲ್ಲ ಮತ್ತು "ಮುದ್ರಣ ಸ್ನೇಹಿ" ಪರಿಸರದಿಂದ ಬಂದವರಾಗಿರುವುದಿಲ್ಲ. ಈಗ ತಾನೇ ನಾವು ಮೇಲೆ ವಿವರಿಸಿರುವುದು ಬೆಳಗಿನ ಹೊತ್ತು ಶಾಲೆಯಲ್ಲಿ ಇವರುಗಳ ಪ್ರತಿದಿನದ ಬೆಳಗಿನ ಆಚರಣೆ.

## ಉದಯೋನ್ಮುಖ ಸಾಕ್ಷರತೆಯ ದೃಷ್ಟಿಕೋನ

ಮಕ್ಕಳು ಅಕ್ಷರಸ್ಥರಾಗಲು ಯಾವಾಗ ಪ್ರಾರಂಭಿಸುತ್ತಾರೆ? ನಾವು ಈ ಪ್ರಶ್ನೆಯನ್ನು ಕೇಳಿದರೆ, ನೀವು ಯಾವಾಗ ಓದಿ ಬರೆದು ಮಾಡಲು ಕಲಿತಿರಿ ಎಂದು ಯೋಚಿಸಿ ; ಅಥವಾ ನಿಮ್ಮ ವಿದ್ಯಾರ್ಥಿಗಳ ಬಗ್ಗೆ ಯೋಚಿಸಿ, '3 ವರ್ಷ', ಅಥವಾ '5 ವರ್ಷ', ಅಥವಾ '7 ವರ್ಷ' ಎಂದು ಹೇಳಬಹುದು. ಇದಕ್ಕೆ ತದ್ವಿರುದ್ಧವಾಗಿ, ಮುದ್ರಿತ ವಸ್ತುಗಳ ಬಳಕೆಯ ಬಗ್ಗೆ ಅಭ್ಯಾಸವಾಗಿರುವ ಮಕ್ಕಳು ಹುಟ್ಟಿನಿಂದಲೇ ಓದು ಬರಹದ ಕಲಿಕೆಯಲ್ಲಿ ತೊಡಗಬಹುದು ಎನ್ನುವುದು ಉದಯೋನ್ಮುಖ ಸಾಕ್ಷರತೆಯ ದೃಷ್ಟಿಕೋನದ ಅಭಿಮತ. ಇದು ಹೇಗೆ ಸಾಧ್ಯ? ಹುಟ್ಟಿದ ಮಗು ಪೆನ್ಸಿಲ್ ಕೂಡ ಹಿಡಿಯಲು ಸಾಧ್ಯವಿಲ್ಲ

ನಾಲ್ಕು ತಿಂಗಳ ಮಗುವಿಗೆ ಅಕ್ಷರಗಳೇನೆಂದು ತಿಳಿದಿರುವುದಿಲ್ಲ. ಆದರೂ ಉದಯೋನ್ಮುಖ ಸಾಕ್ಷರತೆಯ ದೃಷ್ಟಿಕೋನ, ಓದುವುದು ಮತ್ತು ಬರೆಯುವುದನ್ನು ಕಲಿಯುವುದರ ನಿಜವಾದ ಅರ್ಥ ಏನೆಂಬ ಬಗ್ಗೆ ನಮಗಿರುವ ತಿಳುವಳಿಕೆಯನ್ನು ಇನ್ನಷ್ಟು ವಿಶಾಲವಾಗುವಂತೆ ಮಾಡುತ್ತದೆ.

ಈ ದೃಷ್ಟಿಕೋನದ ಪ್ರಕಾರ ಓದುವುದು ಮತ್ತು ಬರೆಯುವುದನ್ನು ಕಲಿಯುವುದು ಎಂದರೆ ಅಕ್ಷರಗಳನ್ನು ಕಲಿಯುವುದು ಅಥವಾ ಪದಗಳನ್ನು ತಪ್ಪಿಲ್ಲದಂತೆ ಬರೆಯುವುದಷ್ಟೇ ಅಲ್ಲ, ಅದಕ್ಕಿಂತ

ಇನ್ನೂ ಹೆಚ್ಚು. ನಾವು ಮದ್ರಣದ (ಪುಸ್ತಕ) ಬಗ್ಗೆ ಅನೇಕ ವಿಷಯಗಳನ್ನು ಈ ನಿರ್ದಿಷ್ಟ ಚಟುವಟಿಕೆಗಳಿಗಿಂತ (ಓದುವುದು, ಬರೆಯುವುದು) ಮೊದಲೇ ಕಲಿಯುತ್ತೇವೆ. ಪುಸ್ತಕಗಳು ಮತ್ತು ಮುದ್ರಿತ ಸಾಮಗ್ರಿಗಳನ್ನು ತನ್ನ ಸುತ್ತಮುತ್ತ ದಿನಾ ನೋಡುವ ಚಿಕ್ಕ ಮಗು ತನ್ನ ಸುತ್ತಲಿರುವ ಜನರಿಗೆ ಇವುಗಳಲ್ಲಿ ಅರ್ಥಪೂರ್ಣವಾದ ವಿಷಯ ಏನೋ ಅಡಗಿದೆ ಎನ್ನುವ ವಿಚಾರವನ್ನು ತುಂಬಾ ಸಣ್ಣ ವಯಸ್ಸಿನಿಂದಲೇ ತಿಳಿದಿರುತ್ತದೆ. ಮಗು ದಿನಾ ಬೆಳಗಿನ ಹೊತ್ತು ತನ್ನ ಅಜ್ಜ ದಿನಪತ್ರಿಕೆ ಓದುವುದನ್ನು ನೋಡಿರಬಹುದು. ಮಗು ತನ್ನ ತಂದೆ ಯಾವುದೋ ಅರ್ಜಿ ಭರ್ತಿಮಾಡುವುದನ್ನಾಗಲೀ, ಅಥವಾ ಆಸ್ಪತ್ರೆಯ ಪರೀಕ್ಷಾ ವರದಿಯನ್ನು ಓದುವುದನ್ನಾಗಲೀ ನೋಡಿರಬಹುದು. ತನ್ನ ತಾಯಿ ಹೊರಗೆ ಹೋದಾಗ ಬಸ್‌ಗಳ ಮೇಲೆ ಬರೆದಿರುವ ಸಂಖ್ಯೆಗಳನ್ನು ಓದುವುದನ್ನು, ಅಥವಾ ಪತ್ರ ಬರೆಯುವುದನ್ನು ಅಥವಾ ಹಣ ಎಣಿಸುವುದನ್ನು ನೋಡಿರಬಹುದು. ಮಗುವಿನ ಪರಿಸರದಲ್ಲಿ (ಮನೆಯಲ್ಲಿ) ಮಕ್ಕಳ ಚಿತ್ರಕಥಾ ಪುಸ್ತಕಗಳು ಇದ್ದರೆ, ಅದನ್ನು ಯಾರಾದರೂ ಮಗುವಿಗೆ ಜೋರಾಗಿ ಓದಿ ಹೇಳುವ ಅಭ್ಯಾಸ ಇದ್ದರೆ, ಮಗು ತಾನೇ ಪುಸ್ತಕವನ್ನು ಸರಿಯಾದ ರೀತಿಯಲ್ಲಿ ಹಿಡಿದುಕೊಂಡು, ಅದರಲ್ಲಿರುವ ಚಿತ್ರಗಳನ್ನು ತದೇಕಚಿತ್ತದಿಂದ ನೋಡುತ್ತಾ, ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತದೆ ಮತ್ತು ಮುಂದೆ ತಾನೇ ಆ ಪುಸ್ತಕವನ್ನು ಓದಲು ಕಲಿಯುತ್ತದೆ (ಚಿತ್ರ 1 ನೋಡಿ. )

> ನ್ಯೂಜಿಲೆಂಡಿನ  ಬಹುಶೃತ ಶಿಕ್ಷಣ ತಜ್ಞೆಯಾದ ಮೇರಿ ಕ್ಲೇ ಅವರು ಮೊದಲ ಬಾರಿಗೆ "ಉದಯೋನ್ಮುಖ ಸಾಕ್ಷರತೆ" (Emergent Literacy) ಎನ್ನುವ ಪದವನ್ನು ರಚಿಸಿದರು. ಅದರ ಅರ್ಥವನ್ನು ಮಕ್ಕಳು ಸಾಂಪ್ರದಾಯಿಕವಾಗಿ ಓದುವುದು ಮತ್ತು ಬರೆಯುವುದನ್ನು ಕಲಿತವರೆನ್ನಿಸಿಕೊಳ್ಳುವ ಮೊದಲೇ ; ಓದುವುದು ಮತ್ತು ಬರೆಯುವುದರ ಬಗ್ಗೆ ಬೆಳೆಸಿಕೊಳ್ಳುವ ಕೌಶಲ, ತಿಳುವಳಿಕೆ ಮತ್ತು ನಡವಳಿಕೆ (ವರ್ತನೆ) ಎಂದು ವ್ಯಾಖ್ಯಾನಿಸಿದರು.

**ಉದಯೋನ್ಮುಖ ಸಾಕ್ಷರತೆಯ ದೃಷ್ಟಿಕೋನದ ಕಲ್ಪಿತ ನಂಬಿಕೆಗಳು (ಊಹೆಗಳು)**

ಮಕ್ಕಳು ಹೇಗೆ ಅಕ್ಷರಸ್ಥರಾಗುತ್ತಾರೆ ಎನ್ನುವ ಬಗ್ಗೆ ಉದಯೋನ್ಮುಖ ಸಾಕ್ಷರತೆಯ ದೃಷ್ಟಿಕೋನ ಕೆಲವು ನಿರ್ಣಾಯಕವಾದ ಕಲ್ಪಿತ ನಂಬಿಕೆಗಳನ್ನು ಅನುಸರಿಸುತ್ತದೆ.

1. ಚಿಕ್ಕ ಮಕ್ಕಳು ಓದುವುದು ಮತ್ತು ಬರೆಯುವುದು ಬಳಕೆಯಲ್ಲಿರುವ ತಮ್ಮ ನಿಜ ಜೀವನದ ಪರಿಸರದಲ್ಲಿನ ಚಟುವಟಿಕೆಯಲ್ಲಿ ಪಾಲ್ಗೊಳ್ಳುವುದು, ಮತ್ತು ಗಮನಿಸುವುದರಿಂದ ಸಾಕ್ಷರತೆಯ ಕಾರ್ಯಗಳನ್ನು (ಓದುವುದು, ಬರೆಯುವುದು. . . . ) ಕಲಿಯುತ್ತಾರೆ.
2. ಇದಕ್ಕೆ ಅರ್ಥಪೂರ್ಣ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದು ಅವಶ್ಯಕ.
3. ಇದು ಆ ಚಟುವಟಿಕೆಗಳಲ್ಲಿ ಪ್ರಸ್ತುತರಾದ ಇತರರ ಜೊತೆ ಪರಸ್ಪರ ಒಡನಾಡುವುದನ್ನು ಒಳಗೊಂಡಿದೆ.

4. ಮಕ್ಕಳು ಮೊದಲು ಓದುವುದು, ನಂತರ ಬರೆಯುವುದು ಎಂಬಂತೆ ಕಲಿಯುವುದಿಲ್ಲ. ಬದಲಾಗಿ ಎರಡೂ ಕೌಶಲಗಳನ್ನೂ ಒಟ್ಟಾಗಿ ಏಕಕಾಲಕ್ಕೆ ಕಲಿಯುತ್ತಾರೆ. ಒಂದರ ಕಲಿಕೆ ಇನ್ನೊಂದರ ಕಲಿಕೆಯನ್ನು ಬೆಂಬಲಿಸುತ್ತದೆ.
5. ಈ ಕಲಿಕೆಯ ಸಾಮರ್ಥ್ಯ ಅವರು ಯಾವ ಭಾಷೆ ಮಾತನಾಡುತ್ತಾರೆ ಎನ್ನುವುದರೊಂದಿಗೆ ತಳುಕು ಹಾಕಿಕೊಂಡಿದೆ.
6. ಓದುವುದು ಮತ್ತು ಬರೆಯುವುದನ್ನು ಕಲಿಯುವ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಮಕ್ಕಳು ಓದು ಬರಹ ಕಲಿಯಲು ಅನೇಕ ಬೆಳವಣಿಗೆಯ ಹಂತಗಳನ್ನು ಹಾದು ಹೋಗುವುದನ್ನು ನೋಡಬಹುದು.

**" ಕಡಿಮೆ ಸಾಕ್ಷರತೆ ಇರುವ ಪರಿಸರದಲ್ಲಿ ಉದಯೋನ್ಮುಖ ಸಾಕ್ಷರತೆ"**

ಉದಯೋನ್ಮುಖ ಸಾಕ್ಷರತೆಗೆ ಸಂಬಂಧಿಸಿದಂತೆ ಸಂಶೋಧನೆಗಳು ಹೆಚ್ಚಾಗಿ ಮುದ್ರಣ ಸ್ನೇಹಿ (ಪುಸ್ತಕ ಸ್ನೇಹಿ) ವಾತಾವರಣವಿರುವ ಮಧ್ಯಮ ವರ್ಗ ಹಾಗೂ ಪಾಶ್ಚಿಮಾತ್ಯ ಸಂಸ್ಕೃತಿಯ ಪರಿಸರದಲ್ಲಿ ನಡೆದಿದೆ. ಹೆಚ್ಚಿನ ಮಕ್ಕಳು ಮೊದಲ ಬಾರಿಗೆ ಅಕ್ಷರಸ್ಥರಾಗುತ್ತಿರುವ ಪೀಳಿಗೆಗೆ ಸೇರಿರುವ ಮನೆಯಲ್ಲಿ, ಮುದ್ರಣ ವಿಚಾರದಲ್ಲಿ ಅತಿ ಕಡಿಮೆ ಅಥವಾ ಇಲ್ಲವೇ ಇಲ್ಲ ಎನ್ನುವಂತಹ ತಿಳುವಳಿಕೆ ಇರುವ ಹಿನ್ನೆಲೆಯಲ್ಲಿ, ಈ ಸಂಶೋಧನೆಗಳ ಫಲಿತಾಂಶವನ್ನು ಹೇಗೆ ಅರ್ಥೈಸಬಹುದು?

ಈ ಸಂದರ್ಭದಲ್ಲಿ, ಅರ್ಥಪೂರ್ಣ ಮುದ್ರಿತ ಸಾಮಗ್ರಿಗಳ ಒಡನಾಟವನ್ನು ಮಕ್ಕಳಿಗೆ ಸಿಗುವಂತೆ ಮಾಡಿ ಮಕ್ಕಳಿಗೆ ಕಲಿಕೆಗೆ ಪೂರಕವಾದ ಅವಕಾಶ ಮಾಡಿಕೊಡುವ ಜವಾಬ್ದಾರಿ, ಆರಂಭಿಕ ಹಂತದ ಭಾಷೆಯ ಕಲಿಕೆಯ (ಪೂರ್ವ ಪ್ರಾಥಮಿಕ, ಪ್ರಾಥಮಿಕ) ತರಗತಿಗಳಿಗೆ ಹೆಚ್ಚಾಗಿರುತ್ತದೆ ಎಂದು ನಾವು ವಾದ ಮಾಡಬಹುದು. ಒಂದು ವೇಳೆ ನಾವು ಮಕ್ಕಳು ಸಕ್ರಿಯವಾಗಿ, ಉತ್ಸಾಹದಿಂದ ಭಾಷೆಯನ್ನು ಕಲಿಯಬೇಕೆಂದು ಬಯಸುವುದಾದರೆ ; ಕಲಿಕೆಗೆ ಪೂರಕವಾದ ಅವಕಾಶ ಕಲ್ಪಿಸುವಾಗ ನಾವು ಮಕ್ಕಳ ಭಾಷೆ, ಸಂಸ್ಕೃತಿ ಮತ್ತು ಅನುಭವಗಳನ್ನು ಒಳಗೊಂಡಂತಹ ಪರಿಸರ ನಿರ್ಮಾಣ ಮಾಡಬೇಕು.

ಕಡಿಮೆ ಸಾಕ್ಷರತೆಯ ಪರಿಸರದಿಂದ ಬಂದಿರುವ ಮಕ್ಕಳನ್ನೂ ಸೇರಿದಂತೆ ಎಲ್ಲಾ ಮಕ್ಕಳೂ ಅರ್ಥವನ್ನು ತಿಳಿದುಕೊಳ್ಳಲು ಸಕ್ರಿಯವಾಗಿರುತ್ತಾರೆ ; ತಮ್ಮ ಪರಿಸರದಲ್ಲಿರುವ ಮುದ್ರಿತ ವಸ್ತುಗಳ ಜೊತೆ ಒಡನಾಡಲು, ಗಮನಿಸಲು ಮತ್ತು ಕಲಿಯಲು ಸಹಜವಾಗಿಯೇ ಉತ್ಸುಕರಾಗಿರುತ್ತಾರೆ ; ಎನ್ನುವ ಕಲ್ಪಿತ ನಂಬಿಕೆಯೊಂದಿಗೆ ನಾವು ಪ್ರಾರಂಭಿಸುತ್ತೇವೆ. ಈ ರೀತಿಯ ತೊಡಗಿಸಿಕೊಳ್ಳುವಿಕೆಯಿಂದ, ಭಾಷೆ ಮತ್ತು ಸಾಕ್ಷರತೆಗೆ ಸಂಬಂಧಪಟ್ಟ ವಿಚಾರಗಳು ಹೇಗೆ ಕೆಲಸ ಮಾಡುತ್ತವೆ ಎನ್ನುವುದನ್ನೂ ಒಳಗೊಂಡಂತೆ, ಸಾಂಪ್ರದಾಯಿಕ ಸಾಕ್ಷರತೆಯ ಹಾದಿಯಲ್ಲಿ ಉಪಯುಕ್ತವಾದ ಅನೇಕ ವಿಷಯಗಳನ್ನು ಮಕ್ಕಳು ಕಲಿಯುತ್ತಾರೆ. ಅವರು ತಮಗೆ ಈಗಾಗಲೇ ತಿಳಿದಿರುವ ಮೌಖಿಕ ಭಾಷೆಯನ್ನು ಇನ್ನಷ್ಟು ಅಭಿವೃದ್ಧಿ ಪಡಿಸಿಕೊಳ್ಳುತ್ತಾರೆ. ಅವರು ಮುದ್ರಣದ (ಮುದ್ರಿತ ವಸ್ತುಗಳ) ಉಪಯೋಗ ಏನೆಂದು ತಿಳಿಯುತ್ತಾರೆ – ನಮ್ಮ ದೈನಂದಿನ ಜೀವನದಲ್ಲಿ ಮುದ್ರಣವನ್ನು ಏಕೆ ಉಪಯೋಗಿಸುತ್ತೇವೆ (ಉದಾ: ರಸ್ತೆ ಸಾರಿಗೆ ಚಿನ್ಹೆಗಳನ್ನು ಓದಲು, ಪಟ್ಟಿ ಮಾಡಲು, ದಿನಪತ್ರಿಕೆ ಓದಲು ಮತ್ತು ಪುಸ್ತಕಗಳನ್ನು ಓದಲು) ಎನ್ನುವುದನ್ನು

ಕಲಿಯುತ್ತಾರೆ. ಮುದ್ರಣ ಹೇಗೆ ಕೆಲಸ ಮಾಡುತ್ತದೆ ಎನ್ನುವ ಬಗ್ಗೆ ಕೆಲವು ನಿಯಮಗಳಿರುತ್ತವೆ. ಕೆಲವು ಲಿಪಿಗಳು ಎಡದಿಂದ ಬಲಕ್ಕೆ ಓದುವಂತಿದ್ದರೆ, ಇನ್ನೂ ಕೆಲವು ಲಿಪಿಗಳು ಮೇಲಿನಿಂದ ಕೆಳಕ್ಕೆ ಓದುವಂತಿರುತ್ತದೆ, ಇತ್ಯಾದಿ ವಿಷಯಗಳನ್ನು ತಿಳಿಯುತ್ತಾರೆ. ತಮಗೆ ತಿಳಿದಿರುವ ಭಾಷೆಯ (ತಮ್ಮ ಮಾತೃ ಭಾಷೆಯ) ಪದಗಳ ಧ್ವನಿ ಕೇಳಿಸಿದಾಗ ಹೆಚ್ಚು ಗಮನವಿಟ್ಟು ಕೇಳಿಸಿಕೊಳ್ಳಲು ಕಲಿಯುತ್ತಾರೆ – ಕೆಲವು ಪದಗಳು ಹೇಗೆ ಪ್ರಾಸಬದ್ಧವಾಗಿರುತ್ತವೆ, ಕೆಲವು ಪದಗಳಲ್ಲಿ ಒಂದೇ ರೀತಿಯ ಧ್ವನಿಯಿರುತ್ತದೆ. ಅಕ್ಷರಗಳನ್ನು ಜೋಡಿಸಿ ಪದಗಳನ್ನು, ವಾಕ್ಯಗಳನ್ನು ಮಾಡಲು ಕಲಿಯುತ್ತಾರೆ. ಆರಂಭಿಕ ಹಂತದಲ್ಲಿ ಅವರು ಮಾಡುವ ಗೀಚುವಿಕೆಯೇ ಮುಂದೆ ಚಿತ್ರ ಬರೆಯಲು ಮತ್ತು ಬರವಣಿಗೆ ಮಾಡಲು ದಾರಿ ಆಗುವುದೆಂದು ಕಲಿಯುತ್ತಾರೆ. ಈ ರೀತಿ ಮುದ್ರಣ ಪ್ರಪಂಚದ ಬಗ್ಗೆ ಅರಿಯಲು ಎಷ್ಟೊಂದು ವಿಷಯಗಳಿವೆ !

ನಾವು ಮೇಲೆ ಹೇಳಿದ ಎಲ್ಲಾ ವಿಚಾರಗಳನ್ನೂ ಇಲ್ಲಿ ವಿವರಿಸುವ ಪ್ರಯತ್ನ ಮಾಡುವುದಿಲ್ಲ. ಬದಲಾಗಿ ಮೂರು ಮುಖ್ಯ ವಿಷಯಗಳ ಬಗ್ಗೆ ಮಾತ್ರ ಗಮನವನ್ನು ಕೇಂದ್ರೀಕರಿಸುತ್ತೇವೆ. ಮತ್ತು ಅದು ಉಳಿದ ವಿಷಯಗಳ ಬಗೆಗಿನ ನಿಮ್ಮ ತಿಳುವಳಿಕೆಯನ್ನು ವಿಶದೀಕರಿಸಲು ಸಹಾಯ ಮಾಡುತ್ತದೆಂದು ನಂಬುತ್ತೇವೆ. ನಾವು ಈ ಕೆಳಗಿನವುಗಳನ್ನು ಗಮನಿಸೋಣ :

1. ಮುದ್ರಣದ ಬಗ್ಗೆ ಅರಿವು ಮೂಡಿಸುವುದು
2. ಉದಯೋನ್ಮುಖ ಓದುವಿಕೆಗೆ ಅವಕಾಶ ಕಲ್ಪಿಸುವುದು.
3. ಉದಯೋನ್ಮುಖ ಬರೆಯುವಿಕೆಗೆ (ಬರವಣಿಗೆಗೆ) ಅವಕಾಶ ಕಲ್ಪಿಸುವುದು.

## ಮುದ್ರಣದ ಬಗ್ಗೆ ಅರಿವು ಮೂಡಿಸುವುದು

ನಾವು ಈ ಮೊದಲೇ ತಿಳಿಸಿದ ಹಾಗೆ, ಕಡಿಮೆ ಸಾಕ್ಷರತೆ ಇರುವ ಸಮುದಾಯದಿಂದ ಬಂದಿರುವ ಮಕ್ಕಳಿಗೆ ತಮ್ಮ ಮನೆಯಲ್ಲಾಗಲೀ, ಸುತ್ತಲಿನ ಪರಿಸರದಲ್ಲಾಗಲೀ ಮುದ್ರಣ/ಮುದ್ರಿತ ವಸ್ತುಗಳ ಬಳಕೆಯ ಬಗ್ಗೆ ತಿಳಿಯುವ ಅನುಭವ ಸಿಕ್ಕಿರುವುದಿಲ್ಲ. ಆದ್ದರಿಂದ ಇಂಥಹ ಮಕ್ಕಳ ಶಿಕ್ಷಕರಾಗಿ ನೀವು ಈ ಮಕ್ಕಳಿಗೆ ತರಗತಿಯಲ್ಲಿ ಮುದ್ರಣದ ಪರಿಕಲ್ಪನೆಯ ಬಗ್ಗೆ ಕಲಿಯುವ ಅವಕಾಶವನ್ನು ಮಾಡಿಕೊಡಬೇಕು.

ಮುದ್ರಣದ ಬಗೆಗಿನ ಪರಿಕಲ್ಪನೆ ಎಂದರೆ – ಮುದ್ರಣ ಹೇಗೆ ಕೆಲಸ ಮಾಡುತ್ತದೆ ಎಂದು ತಿಳಿಯುವುದು. ಮುದ್ರಣ ಒಂದು ಅರ್ಥಪೂರ್ಣ ವಿಷಯವನ್ನು ತಿಳಿಸುತ್ತದೆ ; ಅದನ್ನು ಬೇರೆ ಬೇರೆ ಉದ್ದೇಶಕ್ಕಾಗಿ ಬಳಸಲಾಗುತ್ತದೆ; ಅವು ಅನೇಕ ರೂಪಗಳು, ವೈಶಿಷ್ಟ್ಯತೆ ಮತ್ತು ಸಾಂಪ್ರದಾಯಿಕ ನೆಲೆಗಟ್ಟನ್ನು ಹೊಂದಿರುತ್ತವೆ; ಇವೆಲ್ಲವನ್ನೂ ತಿಳಿಯುವುದು.

ಮುದ್ರಣಕ್ಕೆ ಸಂಬಂಧಪಟ್ಟ ಬೇರೆ ಬೇರೆ ವಿಚಾರಗಳನ್ನು ಅರ್ಥಮಾಡಿಕೊಳ್ಳುವ ಬಗ್ಗೆ ವಿವರಣೆಯನ್ನು ಮುಂದೆ ನೀಡಲಾಗಿದೆ.

## ಮುದ್ರಿತ ಸಾಮಗ್ರಿಗಳ ಪ್ರಸ್ತುತತೆಯನ್ನು ಅರ್ಥಮಾಡಿಕೊಳ್ಳುವುದು

ಸಾಮಾನ್ಯವಾಗಿ ಮಕ್ಕಳು ಶಾಲೆಗೆ ಸೇರಿದಾಗ ಏನು ನಡೆಯುತ್ತದೆಂದು ಗಮನಿಸಿ : ಅವರಿಗೆ ತಿಂಗಳಾನುಗಟ್ಟಲೆ ವರ್ಣಮಾಲೆಯನ್ನು ಪ್ರತಿದಿನವೂ ಯಾಂತ್ರಿಕವಾಗಿ ಕಲಿಸಲಾಗುತ್ತದೆ. ಶಿಕ್ಷಕರು ಅವರಿಗೆ ಪುಸ್ತಕಗಳನ್ನು ಓದಿ ಹೇಳದೇ ಇರಬಹುದು ; ಕಥೆಗಳನ್ನು ಪದ್ಯಗಳನ್ನು ಓದಿ ಹೇಳದೇ ಇರಬಹುದು. ಇಂಥಹ ಒಂದು ಸಂದರ್ಭಗಳಲ್ಲಿ ಮಕ್ಕಳು ಓದಿ ಬರೆದು ಮಾಡುವುದನ್ನು ಒಂದು ಅರ್ಥಪೂರ್ಣ ಚಟುವಟಿಕೆ ಎಂದು ಪರಿಗಣಿಸುವ ಸಂಭವ ಕಡಿಮೆ – ಮಕ್ಕಳು ತಾವು ಕಲಿಯುತ್ತಿರುವ ಅಕ್ಷರಗಳೇ ಒಟ್ಟು ಸೇರಿ ಪದಗಳು, ವಾಕ್ಯಗಳು ಆಗುತ್ತವೆ. ಅವುಗಳ ಮೂಲಕ ಕಥೆ ಹೇಳಬಹುದು, ಅಥವಾ ಅರ್ಥಪೂರ್ಣ ವಿಷಯಗಳನ್ನು ತಿಳಿಯಬಹುದು ಎನ್ನುವುದನ್ನು ಮಕ್ಕಳು ಅರ್ಥಮಾಡಿಕೊಳ್ಳದೇ ಹೋಗಬಹುದು. ಮೆನನ್ ಮತ್ತು ಸಂಗಡಿಗರು (2017) “Literacy Research in Indian Languages (LIRIL)” ವತಿಯಿಂದ ಕರ್ನಾಟಕ ರಾಜ್ಯದ ಯಾದಗಿರಿಯಲ್ಲಿ ನಡೆಸಿದ ಒಂದು ಅಧ್ಯಯನದಲ್ಲಿ, ಒಬ್ಬ ಸಂಶೋಧಕ ಮತ್ತು ಎರಡನೇ ತರಗತಿಯ ಒಂದು ಮಗುವಿನ ನಡುವೆ ನಡೆದ ಸಂಭಾಷಣೆಯನ್ನು ಯಥಾವತ್ತಾಗಿ ಈ ಕೆಳಗೆ ಕೊಡಲಾಗಿದೆ. ಗಮನಿಸಿ.

ಸಂಶೋಧಕ : (ಚಿತ್ರ ಕಥೆಯ ಪುಸ್ತಕ ತೋರಿಸಿ ಕೇಳುತ್ತಾರೆ) ಇದು ಏನು?
ಮಗು : ಇದೊಂದು ಓದುವ “ಕಾಪಿ” ಪುಸ್ತಕ (“ಕಾಪಿ” ಪುಸ್ತಕ ಎನ್ನುವುದು ‘ನೋಟ್‌ಬುಕ್’ನ ಒಂದು ಆಡುಮಾತಿನ ರೂಪ)
ಸಂ : ಇದರೊಳಗೆ ಏನಿದೆ ?
ಮ : ಪದಗಳು.
ಸಂ : ಈ ಪದಗಳಿಂದ ನೀನು ಏನು ಮಾಡುತ್ತೀಯ?
ಮ : ಓದುತ್ತೇನೆ ಮತ್ತು ನನ್ನ ನೋಟ್‌ಬುಕ್‌ನಲ್ಲಿ ಬರೆದುಕೊಳ್ಳುತ್ತೇನೆ.

(ಸುಬ್ರಮಣಿಯಮ್, ಮೆನನ್ ಮತ್ತು ಸುಜಿತ್, 2017, ಪುಟ 7 ರಿಂದ ಉದ್ಧೃತವಾಗಿದೆ)

ಇಲ್ಲಿ ಪುಸ್ತಕದಲ್ಲಿರುವ ಪದಗಳಿಗೆ ಅರ್ಥವಿದೆ, ಅಲ್ಲೊಂದು ಕಥೆಯಿದೆ, ಎನ್ನುವ ಬಗ್ಗೆ ಮಗುವಿಗೆ ಕಲ್ಪನೆಯೇ ಇಲ್ಲ. ಮತ್ತೊಂದೆಡೆ, ಮುದ್ರಿತ ಸಾಮಗ್ರಿಗಳ ಬಗ್ಗೆ ತಿಳುವಳಿಕೆ ಇರುವ ಮಗು ನಾವು ಮಾತನಾಡುವ ಭಾಷೆಯ ಮೂಲಕ ಸಂವಹನ ನಡೆಸುವ ಹಾಗೆ ಓದುವುದು ಮತ್ತು ಬರೆಯುವುದನ್ನು ಕಲಿಯುವುದೂ ಕೂಡ ಸಂವಹನದಲ್ಲಿ ಸಹಾಯ ಮಾಡುತ್ತದೆಂದು ಅರ್ಥಮಾಡಿಕೊಳ್ಳುತ್ತದೆ. ಮುದ್ರಣವನ್ನು ಬೇರೆ ಬೇರೆ ಉದ್ದೇಶಗಳಿಗೆ, ಉದಾಹರಣೆಗೆ – ಇತರರೊಂದಿಗೆ ಸಂವಹನ ನಡೆಸಲು, ವಿಷಯಗಳನ್ನು ದಾಖಲಿಸಲು, ಸಂತೋಷ ಹಾಗೂ ಮನರಂಜನೆಗಾಗಿ ಓದುವುದು, ಇತ್ಯಾದಿಗೆ ಉಪಯೋಗಿಸಬಹುದು ಎನ್ನುವುದನ್ನೂ ಸಹ ತಿಳಿದುಕೊಂಡಿರುತ್ತಾರೆ. ಆದ್ದರಿಂದ, ಮುದ್ರಣದ ಬಗ್ಗೆ,

ಅದು ಅರ್ಥಪೂರ್ಣ ವಿಷಯಗಳನ್ನು ಒಳಗೊಂಡಿರುತ್ತದೆ ಮತ್ತು ತಮ್ಮ ಜೀವನದಲ್ಲಿ ಪ್ರಸ್ತುತವಾಗಿದೆ ಎನ್ನುವುದನ್ನು ಕಲಿಯುವುದು ಬಹುಶಃ ಅತ್ಯಂತ ನಿರ್ಣಾಯಕವಾದ ಅಂಶವಾಗಿದೆ.

**ಮುದ್ರಣ ಹೇಗೆ ಕಾರ್ಯ ನಿರ್ವಹಿಸುತ್ತದೆಯೆಂದು ಅರ್ಥಮಾಡಿಕೊಳ್ಳುವುದು**

ಪುಸ್ತಕಗಳು ಹೇಗೆ ಕಾರ್ಯ ನಿರ್ವಹಿಸುತ್ತದೆಯೆಂದು ಕಲಿಯುವುದರ ಜೊತೆಗೆ ವಿದ್ಯಾರ್ಥಿಗಳು ಮುದ್ರಣದ ಕಾರ್ಯವೈಖರಿಯನ್ನು ಸಹ ಕಲಿಯುವುದು ಅಷ್ಟೇ ಮುಖ್ಯವಾಗುತ್ತದೆ. ಇದಕ್ಕೆ ಉದಾಹರಣೆಗಳು ಕೆಳಕಂಡಂತಿವೆ ;

**ದಿಕ್ಸೂಚಿ :** ಎಲ್ಲಾ ಮುದ್ರಣಗಳೂ ಒಂದು ನಿರ್ದಿಷ್ಟ ದಿಕ್ಕಿನ ಓಟವನ್ನು ಹೊಂದಿರುತ್ತದೆ. ಇಂಗ್ಲೀಷ್, ಹಿಂದಿ, ಕನ್ನಡ ಭಾಷೆಗಳಲ್ಲಿ ಓದುವ ಮತ್ತು ಬರೆಯುವ ದಿಕ್ಕು ಎಡದಿಂದ ಬಲಕ್ಕೆ ; ಆದರೆ ಉರ್ದು ಭಾಷೆಯಲ್ಲಿ ಇದು ಬಲದಿಂದ ಎಡಕ್ಕೆ ಇರುತ್ತದೆ. ಒಂದು ಸಾಲಿನ ಕೊನೆ ತಲುಪಿದಾಗ ನಾವು ಪುನಃ ಹಿಂದಕ್ಕೆ ಬಂದು ಮುಂದಿನ ಸಾಲನ್ನು ಎಡದಿಂದ ಬಲಕ್ಕೆ ಓದಲು/ಬರೆಯಲು ಶುರುಮಾಡುತ್ತೇವೆ. ಈ ವಿಧಾನವನ್ನು ಮಕ್ಕಳಿಗೆ ತೋರಿಸಿಕೊಡಿ. ಇಲ್ಲದಿದ್ದರೆ ಅವರು ಮನಬಂದಂತೆ ಓದಿ, ಬರೆದು ಮಾಡಬಹುದು.

**ಪುಸ್ತಕಗಳನ್ನು ಉಪಯೋಗಿಸುವುದು ಹೇಗೆಂದು ಕಲಿಯುವುದು**

ಮಕ್ಕಳಿಗೆ, ಅದರಲ್ಲೂ ಕಡಿಮೆ ಸಾಕ್ಷರತೆ ಇರುವ ಮನೆಗಳಿಂದ ಬಂದಿರುವ ಮಕ್ಕಳಿಗೆ, ಪುಸ್ತಕಗಳನ್ನು ಉಪಯೋಗಿಸಲು ನಿರ್ದಿಷ್ಟವಾದ ಸಹಾಯ ಬೇಕಾಗಬಹುದು (ಚಿತ್ರ 2 ನೋಡಿ) ಇದನ್ನು ಅರ್ಥಮಾಡಿಕೊಳ್ಳಬೇಕಾದರೆ ಈ ಕೆಳಗೆ ಪಟ್ಟಿ ಮಾಡಿರುವ ವಿಷಯಗಳು ತಿಳಿದಿರಬೇಕು.

- ಪುಸ್ತಕದ ಬೇರೆ ಬೇರೆ ಭಾಗಗಳನ್ನು ತಿಳಿದಿರಬೇಕು (ಉದಾ : ಮುಖಪುಟ, ಹಿಂಬದಿಯ ಪುಟ, ದಿಂಡು) ಮತ್ತು ಅದನ್ನು ಹೇಗೆ ಉಪಯೋಗಿಸಬೇಕೆಂದು (ಓದಲು ಎಲ್ಲಿಂದ ಶುರುಮಾಡಬೇಕು, ಹೇಗೆ ಮುಂದುವರೆಯಬೇಕು) ತಿಳಿದಿರಬೇಕು.
- ಇಂಗ್ಲೀಷ್, ಕನ್ನಡ ಮತ್ತು ಹೆಚ್ಚಿನ ಭಾರತೀಯ ಭಾಷೆಗಳ ಪುಸ್ತಕದ ಪುಟಗಳನ್ನು ಎಡದಿಂದ ಬಲಕ್ಕೆ ಮತ್ತು ಮೇಲಿನಿಂದ ಕೆಳಕ್ಕೆ ಓದಬೇಕೆಂದು ತಿಳಿದಿರಬೇಕು.
- ಚಿತ್ರಗಳು, ಕೋಷ್ಟಕಗಳು, ಚಾರ್ಟ್‌ಗಳು, ಗ್ರಾಫ್‌ಗಳು ಸಹ ಪಠ್ಯದೊಂದಿಗೆ ಇರಬಹುದು. ಒಂದು ಪುಸ್ತಕವನ್ನು ಓದಿ ಅರ್ಥಮಾಡಿಕೊಳ್ಳಲು ಈ ಎಲ್ಲಾ ಅಂಶಗಳನ್ನೂ ಗಮನಿಸಬೇಕಾಗುತ್ತದೆ.

ಚಿತ್ರ 2 : ಒಂದು ಚಿಕ್ಕ ಹುಡುಗ ಪುಸ್ತಕವನ್ನು ತಲೆಕೆಳಗಾಗಿ ಹಿಡಿದು ನೋಡುತ್ತಿದ್ದಾನೆ. ಇದರಿಂದ ಅವನಿಗೆ ಪುಸ್ತಕವನ್ನು ಹೇಗೆ ಉಪಯೋಗಿಸಬೇಕೆಂಬ ಬಗ್ಗೆ ಸರಿಯಾದ ಮಾಹಿತಿ ಇಲ್ಲ ಎನ್ನುವುದು ತಿಳಿಯುತ್ತದೆ. ಚಿತ್ರ ಕೃಪೆ : ಅಖಿಲ ಪೈದಾ

**ಪದಗಳ ಪರಿಕಲ್ಪನೆ :**
ನಾವು ಮಾತನಾಡುವಾಗ ಅನೇಕ ಪದಗಳನ್ನು ಓತಪ್ರೋತವಾಗಿ ಸೇರಿಸಿ ಮಾತನಾಡಬಹುದು. ಅನೇಕ ಮಕ್ಕಳು ಈ ರೀತಿ ಸೇರಿಸಿ ಆಡಿದ ಪದಗಳ ಗುಂಪನ್ನು ಒಟ್ಟಾಗಿ ಒಂದೇ ಪದ ಎಂದು ಯೋಚಿಸಬಹುದು ಮತ್ತು ಬರೆಯುವಾಗ ಅದೇ ರೀತಿ ಬರೆಯಬಹುದು. (ಮಗು 'ಅದು ಹೇಗೆಂದರೆ' ಎನ್ನುವುದನ್ನು 'ಅದ್ಹೇಗಂದ್ರೆ' ಎಂದು ಬರೆಯಬಹುದು) ಇನ್ನೊಂದೆಡೆ ಮಕ್ಕಳು ಒಂದಾದ ಮೇಲೆ ಒಂದಂತೆ ಬರೀ ಅಕ್ಷರಗಳನ್ನೇ ಓದಬಹುದು ಮತ್ತು ಪದಗಳನ್ನು ಗುರುತಿಸಿ ಓದಲು ಅವರಿಗೆ ತಿಳಿಯದೆ ಇರಬಹುದು. "ನನ್ನ ಹೆಸರು ರಾಮ" ಎನ್ನುವ ವಾಕ್ಯವನ್ನು "ನನ್ನಹೆಸರುರಾಮ" ಎಂದು ಓದಬಹುದು.

**ಸಂಪ್ರದಾಯಗಳು :** ಭಾಷೆಯ ಬೆಳವಣಿಗೆಯಲ್ಲಿ ಬಳಕೆಯಲ್ಲಿರುವ ವಿರಾಮ ಚಿನ್ಹೆಗಳ ರೀತಿಯ ಸಂಪ್ರದಾಯಗಳು ಪಠ್ಯದ ಅರ್ಥ ಮತ್ತು ಅಭಿವ್ಯಕ್ತಿಯ ಮೇಲೆ ಪರಿಣಾಮ ಬೀರುತ್ತವೆ. ಉದಾಹರಣೆಗೆ "ಏನಾಯ್ತು?" ಎನ್ನುವ ಪಠ್ಯ ಸಾಮಾನ್ಯವಾದ ಕುತೂಹಲವನ್ನು ಅಭಿವ್ಯಕ್ತಿ ಪಡಿಸಿದರೆ "ಏನಾಯ್ತು? ! " ಎನ್ನುವ ಪಠ್ಯ ಕುತೂಹಲದ ಜೊತೆಗೆ ಆತಂಕ ಮತ್ತು ಉತ್ತರ ತಿಳಿಯುವುದರಲ್ಲಿರುವ ಆತುರವನ್ನು ಅಭಿವ್ಯಕ್ತಿಪಡಿಸುತ್ತದೆ.

**ವಿವಿಧ ರೀತಿಯ ಮುದ್ರಣ ಸಾಮಗ್ರಿಗಳ ಬಗ್ಗೆ ತಿಳಿಯುವುದು**
ಮುದ್ರಣದಲ್ಲಿ ಅನೇಕ ರೀತಿಯ ಸಾಮಗ್ರಿಗಳಿವೆ ; ಪುಸ್ತಕಗಳು, ಕರಪತ್ರಗಳು, ಚಾರ್ಟ್‌ಗಳು, ಪಟ್ಟಿಗಳು, ನೋಟೀಸುಗಳು, ಜಾಹೀರಾತು ಫಲಕಗಳು, ಪತ್ರಗಳು ಇತ್ಯಾದಿ. ಮಕ್ಕಳು ಈ ಎಲ್ಲಾ ರೀತಿಯ ಸಾಮಗ್ರಿಗಳ ಉದ್ದೇಶ, ಬಳಕೆ, ಎಲ್ಲಿ ಮತ್ತು ಹೇಗೆ ಉಪಯೋಗಿಸಲ್ಪಡುತ್ತವೆ ಎನ್ನುವ ಎಲ್ಲಾ ವಿವರಗಳನ್ನು ತಿಳಿದಿರುವುದು ಅವಶ್ಯಕವಾಗುತ್ತದೆ.

**ಮುದ್ರಣ ಸಮೃದ್ಧ ಪರಿಸರದ ಮೂಲಕ ಮುದ್ರಣದ ಬಗ್ಗೆ ಜಾಗೃತಿ ಮೂಡಿಸುವುದು**
ಶಾಲಾ ತರಗತಿಗಳಲ್ಲಿ **2** ಮುದ್ರಣ ಸಮೃದ್ಧ/ಮುದ್ರಣ ಸ್ನೇಹಿ ಪರಿಸರವಿರುವಂತೆ ಏರ್ಪಾಟು ಮಾಡುವುದು ಮಕ್ಕಳಿಗೆ ಮುದ್ರಣದ ಕಾರ್ಯ ವೈಖರಿಯ ಬಗ್ಗೆ ಕಲಿಯಲು ಸಹಾಯ ಮಾಡುತ್ತದೆ. ಈ ಕೈಪಿಡಿಯ ಆರಂಭದಲ್ಲಿ ಪ್ರಸ್ತುತ ಪಡಿಸಿದ ಸಂಕ್ಷಿಪ್ತ ವಿವರಣೆಯಲ್ಲಿ, ವಿದ್ಯಾರ್ಥಿಗಳು ತಮ್ಮ ತರಗತಿಯಲ್ಲಿರುವ ಮುದ್ರಣ ಸಾಮಗ್ರಿಗಳೊಂದಿಗೆ ಹೇಗೆ ವ್ಯವಹರಿಸುತ್ತಾರೆಂದು ನಾವು ಈಗಾಗಲೇ ಗಮನಿಸಿದ್ದೇವೆ. (ಉದಾ : ಬೇರೆ ಬೇರೆ ಕೋಣೆಗಳ ಹಣೆಪಟ್ಟಿ ಓದುವುದು) ಇದರಿಂದ ಮಕ್ಕಳು ಪ್ರತಿ ಮುದ್ರಣ ಸಾಮಗ್ರಿಗೂ ಒಂದು ಉದ್ದೇಶವಿರುತ್ತದೆ ಮತ್ತು ಅದು ನಿರ್ದಿಷ್ಟ ರೀತಿಯಲ್ಲಿ ಕೆಲಸ ಮಾಡುತ್ತದೆ ಎನ್ನುವುದನ್ನು ತಿಳಿಯುತ್ತಾರೆ. ಈ ಕೆಳಗಿನ ಕೋಷ್ಟಕ 1 ನೀವು ಶಾಲೆಯಲ್ಲಿ ಉಪಯೋಗಿಸಬಹುದಾದ ಮುದ್ರಣ ಸಾಮಗ್ರಿಗಳು, ಅವುಗಳ ಕೆಲಸ ಅಥವಾ ಉಪಯೋಗವನ್ನು ಪಟ್ಟಿ ಮಾಡುತ್ತದೆ.

---

2. ಬಳಕೆದಾರರ ಕೈಪಿಡಿ, "ಮುದ್ರಣ–ಸಮೃದ್ಧ ಪರಿಸರವನ್ನು ತರಗತಿಯಲ್ಲಿ ಮೂಡಿಸುವುದು" ಇದನ್ನು ಮುದ್ರಣ ಮತ್ತು ಅದನ್ನು ತರಗತಿಯಲ್ಲಿ ಉಪಯೋಗಿಸುವ ಬೇರೆ ಬೇರೆ ವಿಧಾನಗಳ ಬಗೆಗಿನ ಹೆಚ್ಚಿನ ವಿವರಕ್ಕಾಗಿ ನೋಡಿ.

| |
|---|
| ಚಿತ್ರ 3 : ಚಿತ್ರಮಯ ಪದಕೋಶ, ಸೀತಾ ಶಾಲೆ, ಕರ್ನಾಟಕ<br>ಚಿತ್ರ 4 : ಪದಗಳ ಗೋಡೆ, Organization for early literacy promotion, Rajasthan |

**ಕೋಷ್ಟಕ 1 :**

**ಆರಂಭಿಕ ಹಂತದ ಭಾಷೆಯ ಕಲಿಕೆಯ ತರಗತಿಯಲ್ಲಿ ಉಪಯೋಗಿಸಲು ಶಿಫಾರಸ್ಸು ಮಾಡಲಾದ ವಿವಿಧ ರೀತಿಯ ಮತ್ತು ಪರಿಸರಕ್ಕೆ ಪೂರಕವಾದ ಮುದ್ರಣ ಸಾಮಗ್ರಿಗಳು**

| **ನಮ್ಮ ಶಾಲಾ ಪರಿಸರದಲ್ಲಿರುವ ವಿವಿಧ ರೀತಿಯ ಮುದ್ರಣಗಳು.** |
|---|
| **ವಸ್ತುಗಳು ಅಥವಾ ಸ್ಥಳಗಳ ಹೆಸರನ್ನು ಸೂಚಿಸುವ ಮುದ್ರಣಗಳು**<br>– ‘ಕರಿಹಲಗೆ’ ‘ಬರೆ<br>– ಯುವ ಕೋಣೆ’ ‘ನೋಟ್ ಪುಸ್ತಕಗಳನ್ನು ಇಡುವ ಜಾಗ’ ಈ ರೀತಿಯಾಗಿ ವಿದ್ಯಾರ್ಥಿಗಳಿಗೆ ವಸ್ತುಗಳ ಹೆಸರನ್ನು ಸೂಚಿಸುವ ತಲೆಬರಹಗಳು (ಲೇಬಲ್) |
| **ವಿದ್ಯಾರ್ಥಿಗಳಿಗೆ ಏನು ಮಾಡಬೇಕೆಂಬುದನ್ನು ನೆನಪಿಸುವ ಮುದ್ರಣಗಳು**<br>– ಮಕ್ಕಳು ತರಗತಿಯಲ್ಲಿ ಅನುಸರಿಸಬೇಕಾದ ನಿಯಮಗಳು, ದೈನಂದಿನ ಕಾರ್ಯಗಳು ಇತ್ಯಾದಿಯ ಬಗೆಗೆ ಚಿಕ್ಕ ಸೂಚನಾ ಪಟ್ಟಿಗಳು<br>“ನೀವು ಓದಿದ ನಂತರ ಪುಸ್ತಕವನ್ನು ಅದರ ಜಾಗದಲ್ಲಿಯೇ ವಾಪಸ್ ಇಡಿ.” ; ಶ್. . . .ನಿಶ್ಯಬ್ಧವಾಗಿರಿ ! ನೀವು ಓದುವ ಕೋಣೆಯಲ್ಲೀದ್ದೀರ !” ಇತ್ಯಾದಿಯಾಗಿ ಯಾವುದೇ ವಸ್ತುವನ್ನು ಅಥವಾ ಸ್ಥಳವನ್ನು ಹೇಗೆ ಉಪಯೋಗಿಸಬೇಕೆನ್ನುವುದನ್ನು ನೆನಪಿಸುವ ಸೂಚನಾ ಫಲಕಗಳು. |
| **ವಿದ್ಯಾರ್ಥಿಗಳಿಗೆ ಮಾಹಿತಿ ನೀಡುವ ಮುದ್ರಣಗಳು**<br>– ವರ್ಣಮಾಲೆಯ / ಅಕ್ಷರಗಳ ಚಾರ್ಟ್‌ಗಳು (ಫಲಕಗಳು)<br>– ಕೆಲವು ಸಾಮಾನ್ಯ ಬಳಕೆ ವಸ್ತುಗಳ ಹೆಸರು ಮತ್ತು ಚಿತ್ರಣವನ್ನು ಒಳಗೊಂಡಿರುವ ಸಚಿತ್ರ–ಶಬ್ದಕೋಶ (ಚಿತ್ರ 3 ನೋಡಿ)<br>– ತರಗತಿಯಲ್ಲಿ ಹೆಚ್ಚಾಗಿ ಬಳಸುವ ಕೆಲವು ಪದಗಳನ್ನು ಬರೆದಿರುವ ಫಲಕಗಳನ್ನೊಳಗೊಂಡ “ಪದಗಳ ಗೋಡೆ” (ಉದಾ : ಅಮ್ಮ, ಅಪ್ಪ, ಮಗು, ಹಸು, ಮನೆ, ನೀರು, ಪುಸ್ತಕ ಇತ್ಯಾದಿ. . . .); ನೀವು ಈ ಪದಗಳಿಗೆ ಸಂಬಂಧಪಟ್ಟ ಚಿತ್ರಗಳನ್ನೂ ಸೇರಿಸಬಹುದು. ಅದರಿಂದ ಮಕ್ಕಳಿಗೆ ಅವುಗಳನ್ನು ತಕ್ಷಣ ಹೊಂದಿಸಿ ನೆನಪಿಡಲು ಸುಲಭವಾಗುತ್ತದೆ. (ಚಿತ್ರ 4 ನೋಡಿ)<br>– ಮಕ್ಕಳ ಹೆಸರುಗಳನ್ನು ದೊಡ್ಡದಾಗಿ ಬರೆದು ಗೋಡೆಯ ಮೇಲೆ ಹಾಕಿರುವ ನಾಮ ಫಲಕಗಳು<br>– ಮಕ್ಕಳ ಕೈಕೆಲಸಗಳು (ಚಿತ್ರಗಳು, ಲೇಖನಗಳು, ಕರಕುಶಲ ಸಾಮಗ್ರಿಗಳು) ಮತ್ತು ಅವುಗಳ ವಿವರಣೆ. |

**ವಿದ್ಯಾರ್ಥಿಗಳು ಪ್ರತಿಕ್ರಿಯೆ ನೀಡಬೇಕೆಂದು ಅಥವಾ ಭಾಗವಹಿಸಬೇಕೆಂದು ಸೂಚಿಸುವ ಮುದ್ರಣಗಳು**

- ಹಾಜರಾತಿ ಪುಸ್ತಕ/ಹಾಳೆ (ಚಿತ್ರ 5 ನೋಡಿ)
- ಮಕ್ಕಳು ಯಾವುದಾದರೂ ಚಟುವಟಿಕೆಯಲ್ಲಿ ಭಾಗವಹಿಸಲು ಒಪ್ಪಿಗೆ ನೀಡಿ ಸಹಿ ಮಾಡಿದ ಪತ್ರ
- ತರಗತಿಯ ವೇಳಾಪಟ್ಟಿ, ಇದನ್ನು ಪ್ರತಿದಿನ ಬೆಳಿಗ್ಗೆ ಆ ದಿನದ ಚಟುವಟಿಕೆಗಳ ಬಗ್ಗೆ ವಿದ್ಯಾರ್ಥಿಗಳೊಂದಿಗೆ ಚರ್ಚಿಸಲು ಉಪಯೋಗಿಸಲಾಗುವುದು.

3 ಜತೆಗೂಡಿ ಬರೆಯುವ (ಸಹಕಾರಿ ಬರವಣಿಗೆ/ಸಾಮಾಜಿಕ ಬರವಣಿಗೆ) ವಿಧಾನದಲ್ಲಿ ಸಿದ್ಧಪಡಿಸಿದ ಫಲಕಗಳು ; ಇಲ್ಲಿ ಶಿಕ್ಷಕರ ಸಹಾಯದೊಂದಿಗೆ ಮಕ್ಕಳು ಬರವಣಿಗೆಯನ್ನು ಸಿದ್ಧಪಡಿಸುತ್ತಾರೆ.

- ಮಕ್ಕಳು ಇತ್ತೀಚೆಗೆ ಓದಿದ ಅಥವಾ ಕೇಳಿದ ಪದ್ಯಗಳು ಅಥವಾ ಕಥೆಗಳ ಚಾರ್ಟ್‌ಗಳು ; ಮಕ್ಕಳು ಇದನ್ನು ತಮ್ಮ ಗೆಳೆಯರಿಗೆ ಓದಿ ಹೇಳಲು ಇಷ್ಟಪಡುತ್ತಾರೆ.

**ಓದುವುದು ಮತ್ತು ಬರೆಯುವ ಸ್ಥಳಗಳು – ಓದುವುದು, ಬರೆಯುವುದು ಮತ್ತು ಪದಗಳ ಅಭ್ಯಾಸದ ಕೋಣೆ. 4**

ಮಕ್ಕಳಿಗೆ ಮುದ್ರಣ ಮತ್ತು ಸಾಕ್ಷರತೆಯ ಪ್ರಪಂಚದೊಂದಿಗೆ ಆತ್ಮೀಯವಾಗಿ ಒಡನಾಡಲು ಮತ್ತು ಅನ್ವೇಷಣೆ ಮೂಲಕ ಕಲಿಯಲು ಈ ಕೋಣೆಗಳು ಸಹಾಯ ಮಾಡುತ್ತದೆ.

- **ಓದುವ ಕೋಣೆ,** ಅಥವಾ ತರಗತಿಯ ಗ್ರಂಥಾಲಯ ಇಲ್ಲಿ ಮಕ್ಕಳು ತಮ್ಮಷ್ಟಕ್ಕೆ ತಾವೇ ತಿರುವಿ ಹಾಕಲು ಮತ್ತು ಓದಲು ಸಾಕಷ್ಟು ಪುಸ್ತಕಗಳ ಸಂಗ್ರಹ ಇರುತ್ತದೆ.
- **ಬರೆಯುವ ಕೋಣೆ,** ಇದು ಮಕ್ಕಳ ಮನಬಂದಂತೆ ಗೀಚಲು, ಬರೆಯಲು, ಚಿತ್ರ ಬಿಡಿಸಲು, ಚಿತ್ರಗಳನ್ನು ಕತ್ತರಿಸಿ ಜೋಡಿಸಿ ಹೊಸತೇನೋ ಮಾಡುವುದು, ಇತ್ಯಾದಿ ಚಟುವಟಿಕೆಯಲ್ಲಿ ತೊಡಗಲು ಮತ್ತು ವಿಧವಿಧವಾದ ಮುದ್ರಣ ಸಾಮಗ್ರಿಗಳನ್ನು ಉಪಯೋಗಿಸಲು ಇರುವಂತಹ ಒಂದು ಸ್ಥಳ.
- **ಪದಗಳ–ಅಭ್ಯಾಸದ ಕೋಣೆ,** ಇಲ್ಲಿ ಶಬ್ದಗಳು ಮತ್ತು ಚಿನ್ಹೆಗಳು ಸೇರಿ ಹೇಗೆ ಪದಗಳಾಗುತ್ತವೆ ಎಂದು ಯೋಚಿಸಲು, ಅಕ್ಷರಗಳನ್ನು ಜೋಡಿಸಿ ಪದಗಳನ್ನು ಮಾಡುವುದು, ಜೋಡಿಸಿರುವ ಅಕ್ಷರಗಳನ್ನು ಮರುಜೋಡಣೆ ಅಥವಾ ವಿಂಗಡನೆ ಮಾಡಿ ಪದಗಳನ್ನು ಮಾಡುವುದು ಈ ರೀತಿ ಮಾಡಲು ಬೇಕಾದ ಸಾಮಗ್ರಿಗಳು ಮತ್ತು ಅವಕಾಶ ಮಕ್ಕಳಿಗೆ ದೊರೆಯುತ್ತದೆ. ತರಗತಿಯಲ್ಲಿ ಸ್ಥಳಾಭಾವ ಇದ್ದರೆ ಈ ಕೋಣೆಯನ್ನು ಬರೆಯುವ ಕೋಣೆಯೊಂದಿಗೆ ಸೇರಿಸಬಹುದು.

---

3 ಜೊತೆಗೂಡಿ ಬರೆಯುವ ವಿಧಾನದ ಬಗ್ಗೆ ಈ ಕೈಪಿಡಿಯಲ್ಲಿ ಮುಂದೆ ವಿವರಿಸಲಾಗಿದೆ.

4 (ELI) ನವರ ಮುದ್ರಣ–ಸಮೃದ್ಧ ವಿಷಯದ ಕೈಪಿಡಿಯಲ್ಲಿ ಪ್ರತಿ ಕೋಣೆಗೆ ಬೇಕಾದ ಸಾಮಗ್ರಿಗಳು ಮತ್ತು ನಡೆಸಬೇಕಾದ ಚಟುವಟಿಕೆಗಳು ಏನೆಂದು ತಿಳಿಸಲಾಗಿದೆ.

**ಚಿತ್ರ 5 :** ಇದು ದೈನಂದಿನ ಹಾಜರಾತಿ ಪುಸ್ತಕದ ಹಾಳೆಯ ಚಿತ್ರ. ಮಕ್ಕಳು ಇನ್ನೂ ತಮ್ಮ ಹೆಸರನ್ನು ಬರೆಯಲು ಕಲಿತಿಲ್ಲ. ಆದರೆ ತಮ್ಮ ಹೆಸರನ್ನು ಗುರುತಿಸಬಲ್ಲರು ಮತ್ತು ಅದರ ಮುಂದೆ ಚುಕ್ಕೆ ಇಡುವುದು, ಗುಣಿಸುವ ಚಿನ್ಹೆ ಅಥವಾ ತಮ್ಮ ಹೆಸರಿನ ಮೊದಲ ಅಕ್ಷರ ಇತ್ಯಾದಿ ಉಪಯೋಗಿಸಿ ಸಹಿ ಮಾಡಬಲ್ಲರು. ಪ್ರಗತ್ ಶಿಕ್ಷಣ ಸಂಸ್ಥಾ, ಫಾಲ್ಟನ್, ಮಹಾರಾಷ್ಟ್ರದ ಕಮಲಾ ನಿಂಬಾಲ್ಕರ್ ಬಾಲ ಭವನದಿಂದ ಉದ್ಧೃತವಾದ ಮಾದರಿ ಇದಾಗಿದೆ.

ಕೆಲವು ಬಾರಿ ಶಿಕ್ಷಕರು ತರಗತಿಯಲ್ಲಿ ಮುದ್ರಣ–ಸಮೃದ್ಧ ಪರಿಸರವನ್ನು ನಿರ್ಮಾಣವನ್ನೇನೋ ಮಾಡುತ್ತಾರೆ ; ಆದರೆ ಅದನ್ನು ಅರ್ಥಪೂರ್ಣವಾಗಿ ಉಪಯೋಗಿಸಲು ಮರೆತು ಬಿಡುತ್ತಾರೆ. ಮುದ್ರಣ – ಸಮೃದ್ಧ ಪರಿಸರ ಎನ್ನುವುದು ಮುದ್ರಣದ ಅಲಂಕಾರಿಕ ಪ್ರದರ್ಶನವಲ್ಲ. ಮಕ್ಕಳು ಇದರೊಂದಿಗಿನ ಅರ್ಥಪೂರ್ಣ ಒಡನಾಟದಿಂದ, ಏನಾದರೂ ಕಲಿಯಬೇಕಾದರೆ, ಇದರೊಂದಿಗೆ ಪ್ರತಿದಿನ, ದಿನಪೂರ್ತಿ ಒಡನಾಟ, ಉಪಯೋಗ ಅತ್ಯವಶ್ಯಕ. ಈ ಕೈಪಿಡಿಯ ಆರಂಭದಲ್ಲಿ ನಾವು ಗಮನಿಸಿದ ಉದಾಹರಣೆಯನ್ನು ನೆನಪಿಸಿಕೊಳ್ಳೋಣ–ಅಲ್ಲಿ ಶಿಕ್ಷಕಿ ಲೇಬಲ್‌ಗಳು, ಸೂಚನೆಗಳು ಇವುಗಳನ್ನು ದೈನಂದಿನ ತರಗತಿಯ ದಿನಚರಿಯಲ್ಲಿ (ಮಕ್ಕಳು ಚೀಲ ಇಡುವ ಕೋಣೆ ಗುರುತಿಸಿ ದಿನಾ ಆ ಸ್ಥಳದಲ್ಲೇ ಎಲ್ಲರೂ ತಮ್ಮ ಚೀಲಗಳನ್ನು ಇಡುತ್ತಿದ್ದರು) ಸೇರಿಸಿಬಿಟ್ಟಿದ್ದರು. ನೀವೂ ಕೂಡ ಇದೇ ರೀತಿ ಮಕ್ಕಳನ್ನು ತರಗತಿಯ ಮುದ್ರಣ ಸಾಮಗ್ರಿಗಳೊಂದಿಗೆ ತೊಡಗಿಸಲು ಬೇರೆ ಬೇರೆ ಆಲೋಚನೆ ಮಾಡಬಹುದು.

ಮದ್ರಣ ಸಾಮಗ್ರಿಗಳನ್ನು ಮಕ್ಕಳ ಕಣ್ಣಿನ ನೇರಕ್ಕಿದ್ದು ಅವರ ಕಣ್ಸೆಳೆಯುವಂತೆ, ಸುಲಭವಾಗಿ ಗಮನಿಸಿ ಕಲಿಯುವಂತೆ ಮಾಡಲು ಆಗುವಂತೆ ಇಡುವುದು ಅತ್ಯಂತ ಸೂಕ್ತ. ತರಗತಿಯಲ್ಲಿ ನಡೆಯುತ್ತಿರುವ ವಿದ್ಯಮಾನಕ್ಕೆ ಸ್ಪಂದಿಸುವಂತೆ ಸುಲಭವಾಗಿ ಮಾರ್ಪಾಡು ಮಾಡುವಂತೆ ತರಗತಿಯ ಮುದ್ರಣ ಸಾಮಗ್ರಿಗಳ ವ್ಯವಸ್ಥೆ ಮಾಡುವುದು ಹೆಚ್ಚು ಉಪಯೋಗಕರ. ಇದರ ಅರ್ಥ ಏನೆಂದರೆ, ತರಗತಿಯಲ್ಲಿ ಪ್ರದರ್ಶಿಸಿರುವ ವಸ್ತುಗಳನ್ನು ಮಕ್ಕಳ ಕಲಿಕೆಯ ಅವಶ್ಯಕತೆಗೆ ತಕ್ಕ ಹಾಗೆ ಮತ್ತು ಅವರ ಕಲಿಕೆಯ ಪ್ರಗತಿಗೆ ತಕ್ಕಹಾಗೆ ಬದಲಾಯಿಸುತ್ತಿರುವಂತಿರಬೇಕು.

## ಉದಯೋನ್ಮುಖ ಓದುವಿಕೆಗೆ ಅವಕಾಶಗಳನ್ನು ಒದಗಿಸುವುದು

ಅಕ್ಷರಗಳು ಮತ್ತು ಪದಗಳನ್ನು ಓದಲು ಬರದೆ ಇದ್ದರೂ ಸಹ ಮಕ್ಕಳು ಪುಸ್ತಕವನ್ನು ಹಿಡಿದು ಓದುತ್ತಿರುವಂತೆ ನಟಿಸುವುದನ್ನು ನಮ್ಮಲ್ಲನೇಕರು ನೋಡಿರುತ್ತೇವೆ. ಅವರು ಏನು ಮಾಡುತ್ತಿರುತ್ತಾರೆ? ಬಹುಶಃ ಅವರು ಚಿತ್ರಗಳನ್ನು ಗಮನಿಸುತ್ತಾ ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿರುತ್ತಾರೆ. ಬಹುಶಃ ಅವರು ತಮ್ಮ ಜೊತೆ ಇರುವ ವಯಸ್ಕರನ್ನು ಅನುಕರಿಸುತ್ತಾ ಪುಸ್ತಕದ ಹಾಳೆಗಳನ್ನು ತಿರುವಿ ಹಾಕುತ್ತಿರಬಹುದು, ಮುದ್ರಿತ ಸಾಲುಗಳ ಮೇಲೆ ಬೆರಳಿಟ್ಟು ಓದುತ್ತಿರಬಹುದು. ಬಹುಶಃ ಮನೆಯಲ್ಲಿ ಹಿರಿಯರು ತಮಗೆ ಗಟಿಯಾಗಿ ಓದಿ ಹೇಳಿದ ಕಥೆಯನ್ನು ನೆನಪಿನ ಶಕ್ತಿಯಿಂದ ಓದುತ್ತಿರಬಹುದು. ಅಥವಾ ಅವರು ಬಹುಶಃ ಕೆಲವು ಪದಗಳನ್ನು ಓದಲು ಕಲಿತಿರಬಹುದು ಮತ್ತು ಪುಸ್ತಕವನ್ನು ಅದಕ್ಕಾಗಿ ಗಮನವಿಟ್ಟು ನೋಡಿ ತಮಗೆ ತಿಳಿದಿರುವ ಪದಗಳನ್ನು ಗುರುತಿಸಲು ಪ್ರಯತ್ನಿಸುತ್ತಿರಬಹುದು.

ಮಕ್ಕಳು ನಿಜವಾಗಿ ಓದಲು ಕಲಿಯುವುದಕ್ಕೆ ಮೊದಲೇ ಮೇಲೆ ತಿಳಿಸಿದಂತಹ ಅನೇಕ ನಡುವಳಿಕೆಗಳನ್ನು ಪುಸ್ತಕ ಅಥವಾ ಮುದ್ರಣದ ವಿಚಾರದಲ್ಲಿ ತೋರಿಸಬಹುದು. ಅದನ್ನೇ 'ಉದಯೋನ್ಮುಖ ಓದುವಿಕೆ' ಎನ್ನುವುದು. ಪುಸ್ತಕಗಳು ಮತ್ತು ಇತರ ಮುದ್ರಣ ಸಾಮಗ್ರಿಗಳೊಂದಿಗೆ ಒಡನಾಡುವ ಅವಕಾಶದ ಮೂಲಕ ಮಕ್ಕಳು "ಹೇಗೆ ಓದಬೇಕು" ಎನ್ನುವ ಬಗ್ಗೆ ಅನೇಕ ಉಪಯುಕ್ತ ವಿಷಯಗಳನ್ನು ಕಲಿಯುತ್ತಾರೆ. ಇಷ್ಟೇ ಅಲ್ಲದೇ ಇನ್ನೂ ಅನೇಕ ಬೇರೆ ಅಂಶಗಳೂ ಇರುತ್ತವೆ.

ಮೊದಮೊದಲು ಓದುವಂತೆ ನಟಿಸುವಾಗ ಮಕ್ಕಳು ಪುಸ್ತಕದಲ್ಲಿ ಯಾವುದೋ ಒಂದೇ ಒಂದು ಚಿತ್ರವನ್ನು ಮಾತ್ರ ಗಮನಿಸಿ ನೋಡುತ್ತಿರಬಹುದು. ನಿಧಾನವಾಗಿ ಅವರು ಚಿತ್ರಗಳು ಒಂದಕ್ಕೊಂದು ಸಂಬಂಧ ಪಟ್ಟದ್ದಾಗಿವೆ ಎನ್ನುವುದನ್ನು ಅರ್ಥಮಾಡಿಕೊಂಡು ಆ ಚಿತ್ರಗಳಿಂದ ಒಂದು ಕಥೆಯನ್ನು ಹೇಳಲು ಪ್ರಯತ್ನ ಪಡಬಹುದು. ಒತ್ತಾಸೆ ನೀಡುವ ಹಿರಿಯರು ಮತ್ತು ಜೊತೆಗಾರರ ಸಹಾಯದಿಂದ ಪುಸ್ತಕಗಳೊಂದಿಗೆ ಅರ್ಥಪೂರ್ಣ ಒಡನಾಟ ಹೊಂದಿದ ಮಕ್ಕಳು ನಿಧಾನವಾಗಿ, ಪುಸ್ತಕದಲ್ಲಿನ ಪಠ್ಯ ಮತ್ತು ಚಿತ್ರ ಎರಡೂ ಸೇರಿಸಿ ಓದಿದಾಗ ಕಥೆ ಇರುತ್ತದೆ ಎಂದು ಅರ್ಥಮಾಡಿಕೊಳ್ಳುತ್ತಾರೆ. ಅವರಿಗೆ ಇದು ಒಂದು ಹೊಸರೀತಿಯ ತಿಳುವಳಿಕೆ ಆಗಿರುತ್ತದೆ.

ಮಕ್ಕಳ ಜೊತೆಗಿರುವ ವಯಸ್ಕರು ಪುಸ್ತಕ ಓದಿ ಕಥೆ ಹೇಳಿದಾಗ ಮಕ್ಕಳು ಕಥೆಗಳಿಗೆ ಒಂದು ಊಹಿಸಬಲ್ಲಂತಹ ರಚನಾಕ್ರಮ ಇರುತ್ತದೆ ಎಂದು ಕಲಿಯುತ್ತಾರೆ–ಅಂದರೆ ಕಥೆಯ ಆರಂಭ, ಮಧ್ಯಭಾಗ ಮತ್ತು ಕೊನೆಯ ಭಾಗ. ಕಥೆಗಳಲ್ಲಿ ಯಾವಾಗಲೂ ಪಾತ್ರಗಳು ಮತ್ತು ಕ್ರಿಯೆಗಳು ಇರುತ್ತವೆ ಎನ್ನುವುದನ್ನೂ ಅರ್ಥಮಾಡಿಕೊಳ್ಳುತ್ತಾರೆ. ಮನೆಯಲ್ಲಿ ಮತ್ತು ಶಾಲೆಯಲ್ಲಿ ಪುನಃ ಪುನಃ ಕಥೆ ಹೇಳುವುದು ಮತ್ತು ಕಥೆಗಳನ್ನು ಗಟ್ಟಿಯಾಗಿ ಓದುವುದು ಮಾಡಿದಾಗ ಮಗು ತನ್ನದೇ ಆದ ನಿರೂಪಣೆಗಳನ್ನು (ಕಥೆಗಳನ್ನು) ಹೆಣೆಯಲು ಶುರು ಮಾಡುತ್ತದೆ.

**ತರಗತಿಯಲ್ಲಿ ಉದಯೋನ್ಮುಖ ಓದುವಿಕೆಗೆ ಬೆಂಬಲ ನೀಡುವುದು**

**ಮಕ್ಕಳಲ್ಲಿ ಧ್ವನಿಮೂಲಾತ್ಮಕ ಅರಿವನ್ನು ಬೆಳೆಸಲು ಆಟಗಳು**

ಬೇರೆ ಬೇರೆ ಶಬ್ದಗಳನ್ನು ಪ್ರತಿನಿಧಿಸುವ ಅಕ್ಷರಗಳನ್ನು ಮಕ್ಕಳು ಕಲಿಯುವುದಕ್ಕೂ ಮೊದಲು, ಮಾತನಾಡುವ ಭಾಷೆಯಲ್ಲಿ ಶಬ್ದಗಳ ಪಾತ್ರ ಏನೆಂದು ತಿಳಿಯುವುದು ಮಕ್ಕಳಿಗೆ ಮುಖ್ಯವಾಗುತ್ತದೆ. ನೀವು ಅನೇಕ ರೀತಿಯ, ಆಸಕ್ತಿಕರವಾದ ಆಟಗಳ ಮೂಲಕ ಅಥವಾ ಪ್ರಾಸಬದ್ಧ ಪದಗಳು, ಪದ್ಯಗಳನ್ನು ಹೇಳುವ ಮೂಲಕ ಮಕ್ಕಳಲ್ಲಿ ಈ **5** ಧ್ವನಿಮೂಲಾತ್ಮಕ ಅರಿವನ್ನು ಬೆಳೆಸಬಹುದು.

**ತರಗತಿಯಲ್ಲಿನ ಮುದ್ರಣ ಸಾಮಗ್ರಿಗಳೊಂದಿಗೆ ತೊಡಗಿಸಿಕೊಳ್ಳುವುದು**

ನಾವು ಈ ಹಿಂದೆಯೇ ಚರ್ಚೆ ಮಾಡಿದಂತೆ, ನಿಮ್ಮ ವಿದ್ಯಾರ್ಥಿಗಳನ್ನು ತರಗತಿಯಲ್ಲಿರುವ ಮುದ್ರಣದೊಂದಿಗೆ ಹೆಚ್ಚು ಹೆಚ್ಚಾಗಿ ತೊಡಗಿಸಿ. ಮಕ್ಕಳಿಗೆ ಕಥೆ ಹೇಳುವುದು, ಪದ್ಯ ಓದುವುದು, ಪದಗಳ ಗೋಡೆ ಮೇಲಿರುವ ಪದಗಳನ್ನು ಉಪಯೋಗಿಸಿ ಅಥವಾ **6** ಸಚಿತ್ರ ಶಬ್ದಕೋಶ ಉಪಯೋಗಿಸಿ ಆಸಕ್ತಿದಾಯಕ ಆಟಗಳನ್ನು ಆಡುವುದು ; ಮಕ್ಕಳು ಮಾಡಿದ ಪ್ರದರ್ಶನಕ್ಕೆ ಇಟ್ಟಿರುವ ವಸ್ತುಗಳು,

---

5 ಹೆಚ್ಚಿನ ವಿವರಕ್ಕಾಗಿ ಧ್ವನಿಮೂಲಾತ್ಮಕ ಅರಿವನ್ನು ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ಶಾಲಾ ಹಂತದಲ್ಲಿ ಬೆಂಬಲಿಸುವ ಬಗ್ಗೆ ಇರುವ ಕೈಪಿಡಿ ನೋಡಿ.

6 ಮುದ್ರಣ ಸಮೃದ್ಧ ಪರಿಸರದ ಬಗ್ಗೆ ಇರುವ ELI ಕೈಪಿಡಿ ನೋಡಿ.

ಲೇಬಲ್‌ಗಳ ಜೊತೆ ಒಡನಾಡುವಂತೆ ಮಾಡಿ ; ಈ ರೀತಿ ಅವರಿಗೆ ಮುದ್ರಣದ ಅರಿವು ಹೆಚ್ಚಾಗುವಂತೆ ಮಾಡಬಹುದು. ಮಕ್ಕಳು ನಿಜವಾಗಿ ಅಕ್ಷರಗಳು, ಪದಗಳನ್ನು ಓದುತ್ತಿದ್ದಾರೆಯೇ ಇಲ್ಲವೋ ಎನ್ನುವ ಬಗ್ಗೆ ಹೆಚ್ಚು ಚಿಂತಿಸಬೇಡಿ. ಅವರು ನೆನಪಿನ ಶಕ್ತಿಯಿಂದ ಅಥವಾ ನೋಡಿ ಓದಿದರೆ ಅಷ್ಟೇ ಸಾಕು. ದಿನ ಕಳೆದ ಹಾಗೆ ಅವರು ಅಕ್ಷರಗಳು, ಪದಗಳನ್ನು ಕಲಿಯುತ್ತಾರೆ.

**ಜೊತೆಗೂಡಿ ಓದುವುದು :** ಈ ಚಟುವಟಿಕೆಗಾಗಿ ಒಂದು ದೊಡ್ಡ ಆಕಾರದ ದೊಡ್ಡ ಚಿತ್ರಗಳು, ಪಠ್ಯ ಇರುವ ಪುಸ್ತಕ ಅಥವಾ ಕಥೆ ಅಥವಾ ಪದ್ಯವನ್ನು ದಪ್ಪ ಅಕ್ಷರಗಳಲ್ಲಿ ವಿವರಣೆ ಮಾಡಿರುವ ಫಲಕಗಳನ್ನು ಆರಿಸಿಕೊಳ್ಳಿ. ಆಯ್ದ ಪಠ್ಯವನ್ನು ಒಂದೆರಡು ದಿನಗಳವರೆಗೆ ಮತ್ತೆ ಮತ್ತೆ ಅನೇಕ ಸಾರಿ ಓದಿ. ಓದುವಾಗ ನೀವು ಓದುತ್ತಿರುವ ಪದ ಹಾಗೂ ಸಾಲಿನ ಮೇಲೆ ಬೆರಳಿಟ್ಟು ತೋರಿಸುತ್ತಾ ಓದಿ (ಚಿತ್ರ 6 ನೋಡಿ.) ಮಕ್ಕಳು ನಿಮ್ಮ ಜೊತೆಗೂಡಿ ಅದನ್ನೇ ಅನುಸರಿಸುತ್ತಾ, ತಮಗೆ ಸಾಧ್ಯವಾದಷ್ಟು ಜೊತೆಗೂಡಿ ಓದುತ್ತಾರೆ. ಈ ರೀತಿ ಮಾಡುವುದರಿಂದ ಮಕ್ಕಳಿಗೆ ಮುದ್ರಣದ ಬಗ್ಗೆ ಅನೇಕ ಪರಿಕಲ್ಪನೆಗಳು ತಿಳಿಯುತ್ತಾ ಹೋಗುತ್ತದೆ. ಮುದ್ರಣವನ್ನು ಓದುವ ದಿಕ್ಕು (ಎಡದಿಂದ ಬಲಕ್ಕೆ), ಹಾಳೆಗಳನ್ನು ಹೇಗೆ ತಿರುಗಿಸಬೇಕು, ಪಠ್ಯದ ಜೊತೆಗೆ ಇರುವ ಚಿತ್ರಗಳನ್ನು ಒಟ್ಟಾಗಿ ಹೇಗೆ ಅರ್ಥಮಾಡಿಕೊಳ್ಳಬೇಕು ಇವೆಲ್ಲಾ ತಿಳಿಯುತ್ತದೆ. ಈ ರೀತಿ ಓದುವುದನ್ನು ಮುಂದುವರಿಸಿದ ಹಾಗೆ, ನಂತರದ ದಿನಗಳಲ್ಲಿ ಪದಗಳಲ್ಲಿರುವ ವಿಶೇಷತೆಗಳು, ವಿರಾಮ ಚಿಹ್ನೆಗಳು ಇತ್ಯಾದಿಯ ಬಗ್ಗೆ ತೋರಿಸಿ ಕಲಿಸಬಹುದು.

ಚಿತ್ರ 6. ದೊಡ್ಡ ಪುಸ್ತಕವನ್ನು ಜೊತೆಗೂಡಿ ಓದುತ್ತಿರುವುದು QUEST. ಮಹಾರಾಷ್ಟ್ರ

**ಪ್ರತಿದಿನ ಜೋರಾಗಿ (ಗಟ್ಟಿಯಾಗಿ) ಓದುವುದು.**

ಮಕ್ಕಳು ಅಧಿಕೃತ ಸಂದರ್ಭಗಳಲ್ಲಿ, ತಾವೇ ನಿಜವಾಗಿ (ಸ್ವತಃ) ಓದಿ ಬರೆದು ಮಾಡುವಾಗ ಅವರು ಮುದ್ರಣದ ಬಗ್ಗೆ ಬಹಳ ಚೆನ್ನಾಗಿ ಕಲಿಯುತ್ತಾರೆ. (ಕ್ಲೇ 1991) ಒಳ್ಳೆಯ ಪುಸ್ತಕಗಳನ್ನು ಜೋರಾಗಿ ಓದುವಾಗ ಅದರಲ್ಲಿ ಭಾಗವಹಿಸುವುದು ಅಂಥಹ ಒಂದು ಶಕ್ತಿಯುತವಾದ ಅನುಭವ. ಇದು ಸಾಕ್ಷರತೆಯ ಎಲ್ಲಾ ಆಯಾಮಗಳ ಕಲಿಕೆಗೆ ಬಹಳ ಲಾಭದಾಯಕವಾಗಿರುತ್ತದೆ. ಆದರೆ, ತೀರಾ ಮೂಲಭೂತವಾದ ಮಟ್ಟದಲ್ಲಿ ಇದು ಮಕ್ಕಳಿಗೆ ಆಡುವ ಭಾಷೆ ಮುದ್ರಣದಲ್ಲಿ ಹೇಗೆ ಪ್ರತಿನಿಧಿಸಲ್ಪಡುತ್ತದೆ ; ಪುಸ್ತಕವನ್ನು ಹೇಗೆ ಉಪಯೋಗಿಸಬೇಕು, ಒಂದಕ್ಕೊಂದು ಸಂಬಂಧ ಇರುವಂತಹ ಉದ್ದುದ್ದನೆಯ ಪಠ್ಯವನ್ನು ಹೇಗೆ ಅರ್ಥಮಾಡಿಕೊಳ್ಳುವುದು, ಇವುಗಳನ್ನು ತೋರಿಸಿಕೊಡುತ್ತದೆ. ಮತ್ತು ಇದೆಲ್ಲವೂ ಒಂದು ಆಪ್ಯಾಯಮಾನವಾದ ಹರುಷದ ವಾತಾವರಣದಲ್ಲಿ ನಡೆಯುತ್ತದೆ. ಆದ್ದರಿಂದ ನಿಮ್ಮ ವಿದ್ಯಾರ್ಥಿಗಳೊಂದಿಗೆ ಪ್ರತಿದಿನ ಗಟ್ಟಿಯಾಗಿ ಓದಲು ಪ್ರಯತ್ನಪಡಿ. ಬೇರೆ ಬೇರೆ ರೀತಿಯ ಪುಸ್ತಕಗಳನ್ನು ಉಪಯೋಗಿಸಿ. ಅದು ಮಕ್ಕಳಿಗೆ ಮುದ್ರಣವನ್ನು ಉಪಯೋಗಿಸಿ ಅರ್ಥವನ್ನು ತಿಳಿಸುವ ಬೇರೆ ಬೇರೆ ರೀತಿಯನ್ನು ತಿಳಿಯಲು ಸಹಾಯ ಮಾಡುತ್ತದೆ.

**ಚಿತ್ರಗಳನ್ನು ಓದುವುದು :** ಮಕ್ಕಳಿಗೆ ಚಿತ್ರಗಳನ್ನು ಓದಲು ಉತ್ತೇಜನ ಕೊಡಬಹುದು. ಅನೇಕ ಆಸಕ್ತಿದಾಯಕ ಚಟುವಟಿಕೆಗಳು ನಡೆಯುತ್ತಿರುವುದನ್ನು ಹೊಂದಿರುವ ಒಂದೇ ಚಿತ್ರದಿಂದ ಮಕ್ಕಳು

ತಮ್ಮದೇ ಆದ ಕಥೆಗಳನ್ನು ಸೃಷ್ಟಿಸಿ ಹೇಳಲು ಅನುಕೂಲವಾಗುತ್ತದೆ. ಪಠ್ಯವಿಲ್ಲದೆ, ಕೇವಲ ಸರಣಿ ಚಿತ್ರಗಳಿರುವ ಪುಸ್ತಕವನ್ನು ಮಕ್ಕಳಿಗೆ ಕೊಡುವುದೂ ಅಷ್ಟೇ ಮುಖ್ಯವಾಗುತ್ತದೆ. ಏಕೆಂದರೆ ಚಿತ್ರಗಳನ್ನು ಓದುತ್ತಿರುವ ಹಾಗೆ ಮಕ್ಕಳಿಗೆ ತಮ್ಮದೇ ಕಥೆಯನ್ನು ಹೆಣೆಯುತ್ತಾ ಹೋಗಲು ಸಹಾಯವಾಗುತ್ತದೆ.

**ಓದುವ ಕೋಣೆ ಅಥವಾ ತರಗತಿಯ ಗ್ರಂಥಾಲಯ**

ತರಗತಿಯ ಓದುವ ಕೋಣೆಯಲ್ಲಿ ಮಕ್ಕಳಿಗೆ ತಮಗಿಷ್ಟವಾದ ಪುಸ್ತಕವನ್ನು ಹುಡುಕಿ, ತೆರೆದು, ತಿರುವಿ ಹಾಕಲು ಅವಕಾಶ ಮತ್ತು ಸ್ವಾತಂತ್ರ್ಯ ಕೊಡಿ. ನೀವು ತರಗತಿಯಲ್ಲಿ ಮಕ್ಕಳಿಗೆ ಈಗಾಗಲೇ ಗಟ್ಟಿಯಾಗಿ ಓದಿ ಹೇಳಿರುವ ಪುಸ್ತಕಗಳನ್ನು ಗ್ರಂಥಾಲಯದಲ್ಲಿ ಸೇರಿಸಲು ಮರೆಯಬೇಡಿ. ಮಕ್ಕಳಿಗೆ ಪುಸ್ತಕಗಳಲ್ಲಿನ ವಿವರಣೆ ನೋಡಿ ಪ್ರಶ್ನೆ ಕೇಳಲು, ನೀವು ಗಟ್ಟಿಯಾಗಿ ಓದಿ ಹೇಳಿರುವ ಅವರಿಗಿಷ್ಟವಾದ ಪುಸ್ತಕಗಳಿಂದ ಕಥೆಯನ್ನು ತಮ್ಮದೇ ರೀತಿಯಲ್ಲಿ ಹೇಳಲು, ಅಥವಾ ಆ ಪುಸ್ತಕಗಳ ಬಗ್ಗೆ ತಮಗೆ ಅನ್ನಿಸಿದ್ದ ಪ್ರತಿಕ್ರಿಯೆಯನ್ನು ಚಿತ್ರ ಬರೆಯುವ ಮೂಲಕ ಅಥವಾ ಪದಗಳಲ್ಲಿ ಬರೆಯುವ ಮೂಲಕ ತಿಳಿಸಲು ಉತ್ತೇಜನ ಕೊಡಿ.

**ಪದಗಳ ಫಲಕಗಳು (ಪದಗಳ ಕಾರ್ಡ್‌ಗಳು)**

ಇವುಗಳು ಪದಗಳು ಮತ್ತು ಅವುಗಳ ವಿವರಣೆಯನ್ನು ಒಳಗೊಂಡಿರುತ್ತವೆ. ನಾವು ಹಿಂದೆಯೇ ಹೇಳಿದ ಹಾಗೆ, ಇನ್ನೂ ಓದಲು ಬರದಿದ್ದರೂ ಸಹ ಮಕ್ಕಳು ಚಿತ್ರಗಳನ್ನು ನೋಡಿ ಪದ ಏನೆಂದು ಊಹಿಸಿ ಹೇಳಬಲ್ಲರು. ಈ ಕಾರ್ಡ್‌ಗಳನ್ನು ಉಪಯೋಗಿಸಿ ಪದಗಳ ಆಟವನ್ನು ಆಡಬಹುದು. ಉದಾಹರಣೆಗೆ – ವಿದ್ಯಾರ್ಥಿಗಳಿಗೆ ಪದದ ಮೊದಲ ಅಕ್ಷರದ ಶಬ್ದ ಅಥವಾ ಕೊನೆಯ ಅಕ್ಷರದ ಶಬ್ದದ ಆಧಾರದಲ್ಲಿ ವಿಂಗಡಣೆ ಮಾಡಲು ಹೇಳುವುದು. ನಂತರ, ಮಕ್ಕಳು ಅಕ್ಷರಗಳನ್ನು ಕಲಿತ ಮೇಲೆ ನೀವು ನೆಲದ ಮೇಲೆ ಬೇರೆ ಬೇರೆ ಜಾಗದಲ್ಲಿ ಕೆಲವು ಅಕ್ಷರಗಳನ್ನು ಬರೆದು ಮಕ್ಕಳಿಗೆ ಆ ಅಕ್ಷರದಿಂದ ಆರಂಭವಾಗುವ (ಅಥವಾ ಕೊನೆಯಾಗುವ) ಹೆಸರಿರುವ ಕಾರ್ಡ್‌ಗಳನ್ನು ಹುಡುಕಿ ಆಯಾ ಜಾಗದಲ್ಲಿ ಕಾರ್ಡ್‌ಗಳನ್ನು ಇಡುವಂತೆ ಹೇಳಬಹುದು. ಈ ಕಾರ್ಡ್‌ಗಳನ್ನು ಪದಗಳ ಗೋಡೆಯ ಮೇಲೆ ಪ್ರದರ್ಶಿಸಿರಿ. ಮಕ್ಕಳಿಗೆ ಈ ಕಾರ್ಡ್‌ಗಳಲ್ಲಿರುವ ಪದಗಳನ್ನು ಬರೆಯಬೇಕಾದಾಗ ಕಾರ್ಡ್‌ನ್ನು ನೋಡಿಕೊಂಡು ಬರೆಯಲು ಉತ್ತೇಜನ ಕೊಡಿ.

**ಅಕ್ಷರದ ಕಾರ್ಡ್‌ಗಳನ್ನು ಉಪಯೋಗಿಸಿ ಆಟ ಆಡುವುದು**

ಒಂದೊಂದು ಕಾರ್ಡ್‌ಗಳ ಮೇಲೆ ಒಂದೊಂದು ಅಕ್ಷರ ಬರೆಯಿರಿ. ಈ ಅಕ್ಷರಗಳ ಶಬ್ದ ಹಾಗೂ ಚಿನ್ಹೆಗಳ ಕಡೆಗೆ ಮಕ್ಕಳ ಗಮನ ಸೆಳೆಯಿರಿ. "ಆರಂಭಿಕ ಸಾಕ್ಷರತಾ ಪ್ರಚಾರ ಸಂಸ್ಥೆಯು" ಅಕ್ಷರಗಳ ಕಲಿಕೆಯನ್ನು ಇನ್ನಷ್ಟು ಬಲಪಡಿಸಲು ಅಕ್ಷರಗಳ ರೈಲುಗಾಡಿಯನ್ನು ಮಾಡುವುದನ್ನು ಪ್ರೋತ್ಸಾಹಿಸುತ್ತದೆ. ಮಕ್ಕಳು ಒಂದು ಹೊಸ ಅಕ್ಷರ ಕಲಿತಾಗ ಆ ಅಕ್ಷರದಿಂದ ಶುರುವಾಗುವ ಎಷ್ಟು ಸಾಧ್ಯವೋ ಅಷ್ಟು ಪದಗಳ ಚಿತ್ರವನ್ನು ಬರೆಯುತ್ತಾರೆ. ಉದಾಹರಣೆಗೆ 'ಕ' ಅಕ್ಷರದ ರೈಲುಗಾಡಿಯಲ್ಲಿ ಕಣ್ಣು, ಕನ್ನಡಕ, ಕಮಲ, ಕಲಶ, ಕಲ್ಲಂಗಡಿ ಇತ್ಯಾದಿ ಪದಗಳಿರಬಹುದು. (ಚಿತ್ರ 7 ನೋಡಿ). ಮಕ್ಕಳು ಬೇಕಾದರೆ ಚಿತ್ರಗಳ ಎದುರಿಗೆ

ಅವುಗಳ ಹೆಸರನ್ನೂ ಬರೆಯುವ ಪ್ರಯತ್ನ ಮಾಡಬಹುದು. (ಉದಯೋನ್ಮುಖ ಬರವಣಿಗೆ, ಮುಂದಿನ ಭಾಗ ನೋಡಿ) ಬದಲಾಗಿ, ಮಕ್ಕಳು ಸಚಿತ್ರ–ಶಬ್ದಕೋಶ ಅಥವಾ ಪದಗಳ ಗೋಡೆಯನ್ನು ನೋಡಬಹುದು.

| |
|---|
| ಚಿತ್ರ 7. ಒಂದು ಮಗು 'ಕ' ಅಕ್ಷರದ ರೈಲುಗಾಡಿ ಮಾಡಿರುವುದು. (DELP) ರಾಜಾಸ್ಥಾನ. |

**ಉದಯೋನ್ಮುಖ ಬರವಣಿಗೆಗೆ ಅವಕಾಶ ಮಾಡಿಕೊಡುವುದು**

ಮಕ್ಕಳು ಸರಿಯಾಗಿ ಓದಲು ಕಲಿಯುವ ಮೊದಲು ಹೇಗೆ ಓದುವಂತೆ ನಟಿಸುತ್ತಾರೋ (ಅನುಕರಣೆ), ಅದೇ ರೀತಿ ಅವರು ಬರೆಯುವುದನ್ನು ಕಲಿಯುವ ಮೊದಲು ಅನೇಕ ರೀತಿಯ ಉದಯೋನ್ಮುಖ ಬರವಣಿಗೆಯ ನಡುವಳಿಕೆಯನ್ನು ತೋರಬಹುದು.

**ಚಿಕ್ಕ ಮಕ್ಕಳ ಬರವಣಿಗೆಯು ಅವರ ಮಾತು, ಬರೆಯುವ ಚಿತ್ರಗಳು, ಓದು ಮತ್ತು ನಟಿಸುವ–ಆಟ ಇವುಗಳಿಗೆ ಸಂಬಂಧಪಟ್ಟದ್ದಾಗಿರುತ್ತದೆ**. ಬರೆಯುವುದನ್ನು ಶುರುಮಾಡಿದ ಹೊಸತರಲ್ಲಿ ಚಿಕ್ಕ ಮಕ್ಕಳು ಕೈಸನ್ನೆ, ಮಾತು, ಚಿತ್ರ ಬರೆಯುವುದು, ಅಕ್ಷರಗಳಂತೆ ಗೀಚುವುದು ಇವೆಲ್ಲವನ್ನೂ ಒಂದರೊಡನೊಂದು ಸೇರಿಸಿ ಬಳಸುತ್ತಿರುತ್ತಾರೆ ; ಎನ್ನುವುದನ್ನು ಆನ್ ಡೈಸನ್ (1988) ಅವರು ಉದಯೋನ್ಮುಖ ಬರವಣಿಗೆಯಲ್ಲಿ ತೊಡಗಿರುವ ಚಿಕ್ಕ ಮಕ್ಕಳ ಬಗೆಗಿನ ಆಳವಾದ ಅಧ್ಯಯನದಲ್ಲಿ ಗಮನಿಸಿದರು. ಅವರು (ಮಕ್ಕಳು) ಒಂದು ಆಟದ ಲಾರಿಯನ್ನು ತೆಗೆದುಕೊಂಡು, ಅದನ್ನು ನೆಲದ ಮೇಲೆ ಓಡಾಡಿಸುತ್ತಾ, "(ವ್ರೂಂ. . .ವ್ರೂಂ. . ..ಪೀಂ. . . .ಪೀಂ. . .)" ಎಂದು ಶಬ್ದ ಮಾಡುತ್ತಾ ಆಡಬಹುದು. ಈ ಲಾರಿಯ ಓಡಾಟದ ಬಗ್ಗೆ ಅವರು ತಮ್ಮ ಗೆಳೆಯರಿಗೆ ಒಂದು ದೊಡ್ಡ ಕಥೆಯನ್ನೂ ಹೇಳಬಹುದು, ಮತ್ತು ಕಾಗದದ ಮೇಲೆ ತಾವು ಹೇಳುತ್ತಿರುವ ವಿಚಾರದ ಬಗ್ಗೆ ಕೆಲವೇ ಗುರುತುಗಳನ್ನು ಬರೆಯಬಹುದು.

ಇದೇ ರೀತಿಯಾಗಿ ಅವರು ಹಾಳೆಯ ಮೇಲೆ ಏನೇನೋ ಗೀಚಿ "ಬರೆಯ" ಬಹುದು. ಅದು ದೊಡ್ಡವರಿಗೆ ಏನೂ ಅರ್ಥವಿಲ್ಲದ ಗೀಚುವಿಕೆಯಾಗಿ ಕಾಣಬಹುದು. ಆದರೆ ನೀವು ಮಕ್ಕಳನ್ನು ಅವರು ಏನು ಬರೆದಿದ್ದಾರೆಂದು ಕೇಳಿದರೆ ಅವರು ಅನೇಕ ವಿಚಾರಗಳನ್ನು ಹೇಳಬಹುದು. (ಚಿತ್ರ 8 ನೋಡಿ) ದಿನ ಕಳೆದ ಹಾಗೆ ಅವರು ಅಕ್ಷರದ ಹಾಗೆ ಕಾಣುವಂತೆ ಗೀಚಬಹುದು ಮತ್ತು ಅದನ್ನು ತಮ್ಮ **7** ಚಿತ್ರಗಳೊಂದಿಗೆ ಸೇರಿಸಿ ಬರೆಯಬಹುದು. ಇವೆಲ್ಲವೂ ಮಕ್ಕಳು ಸರಿಯಾದ ರೀತಿಯಲ್ಲಿ ವಯಸ್ಕರಿಗೆ ತಿಳಿಯುವ ಹಾಗೆ ಬರೆಯಲು ಸಾಧ್ಯವಾಗುವ ಮೊದಲಿನ ಮುಖ್ಯವಾದ ಹಂತಗಳು. ಸಾಂಪ್ರದಾಯಿಕವಾಗಿ ಬರೆಯುವುದನ್ನು ಕಲಿಯಲು ಮಕ್ಕಳಿಗೆ ವರ್ಷಗಳೇ ಬೇಕಾಗುತ್ತದೆ. ಹೀಗಿದ್ದರೂ ಸಹ ನೀವು ಮಕ್ಕಳ ಮೊದಲ ಹಂತದ ಬರವಣಿಗೆಯ ಪ್ರಯತ್ನಗಳನ್ನು ಗಮನಿಸಿ ಅವರನ್ನು ಬರೆಯಲು ಪ್ರೋತ್ಸಾಹಿಸಬೇಕು.

| |
|---|
| ಚಿತ್ರ 8 : ಮೊದಲನೇ ತರಗತಿಯ ಆರಂಭದಲ್ಲಿ ಒಂದು ಮಗು ಬರೆದಿರುವ ಚಿತ್ರ. ಚಿತ್ರ ಕೃಪೆ : ಮೆನಸ್ ಮತ್ತು ಇತರರು, 2017. ತನ್ನ ಚಿತ್ರದ ಬಗ್ಗೆ ಮಗು ಹೇಳಿದ್ದು – ಹುಡುಗರು ಗಾಳಿಪಟ ಹಾರಿಸುತ್ತಾರೆ ; ಮರ ಹತ್ತುತ್ತಾರೆ ; ಆಡುತ್ತಾರೆ. |

---

7 ELI ಬ್ಲಾಗ್ "ಮಕ್ಕಳ ಬರವಣಿಗೆ" (Children's writing) ನೋಡಿ. ಇಲ್ಲಿ ಭಾರತೀಯ ಭಾಷೆಯಲ್ಲಿ ಉದಯೋನ್ಮುಖ ಬರವಣಿಗೆಯ ವಿವಿಧ ಹಂತಗಳು ಹೇಗಿರುತ್ತವೆ. ಅವುಗಳ ಪ್ರಾಮುಖ್ಯತೆ ಏನು ತಿಳಿಯಬಹುದು.

**ಮಕ್ಕಳು ಭಾವನಾತ್ಮಕವಾಗಿ ಮುಖ್ಯವೆನಿಸುವ ವಿಷಯಗಳ ಬಗ್ಗೆ ಬರೆಯುತ್ತಾರೆ.**

ನೀವು ಶಾಲೆಯಲ್ಲಿ ಮಕ್ಕಳಿಗೆ ಯಾವುದಾದರೊಂದು ವಿಷಯವನ್ನು ಕೊಟ್ಟು ಅದರ ಬಗ್ಗೆ ಬರೆಯಲು ಹೇಳಿದರೆ ಮಕ್ಕಳು ಅದನ್ನು ಬಿಟ್ಟು ತಮಗೆ ಭಾವನಾತ್ಮಕವಾಗಿ ಮುಖ್ಯ ಎನಿಸಿದ ವಿಷಯದ ಬಗ್ಗೆ ಬರೆಯುವುದನ್ನು ನೀವು ಗಮನಿಸಿರಬಹುದು. ಲಿರಿಲ್ (LIRIL) ಅವರ ಅಧ್ಯಯನದಲ್ಲಿ (ಮೆನನ್ ಮತ್ತು ಇತರರು, 2017), ಒಂದು ಮಗು ಬಲೂನ್‌ಗಳನ್ನು ಮಾರುವವನ ಚಿತ್ರ ಬರೆಯಲು ಹೇಳಿದಾಗ (ಚಿತ್ರ 9) ನೋಡಿ. ತನ್ನ ತಂದೆಯ ಚಿತ್ರ ಬರೆಯಿತು. ಮಗು ಚಿತ್ರವನ್ನು ಹೇಗೆ ಲೇಬಲ್ ಮಾಡಿದೆ ಗಮನಿಸಿ – "ನನ್ನ ಅಪ್ಪ ನನ್ನದು" ಮಗು ಕೊಟ್ಟಿರುವ ವಿಷಯ ಬಿಟ್ಟು ಬೇರೇನೋ ಬರೆದರೂ, ಅವನು ಮುದ್ರಣವನ್ನು ಅನ್ವೇಷಣಾತ್ಮಕವಾಗಿ ಬಳಸಿ ತನ್ನ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸಿದ್ದ. ಈ ರೀತಿಯ ಪ್ರತಿಕ್ರಿಯೆಗೆ ಅವಕಾಶ ಕೊಡಬೇಕು. ಇಲ್ಲದಿದ್ದರೆ ಮಕ್ಕಳಿಗೆ ಬರವಣಿಗೆ ಅವಶ್ಯಕ ಎನ್ನಿಸದೆ ಬರೆಯಲು ಉದಾಸೀನತೆ ತೋರಿಸಬಹುದು.

**ಮಕ್ಕಳು ಕ್ರಮೇಣವಾಗಿ ಚಿನ್ಹೆಗಳಿಗೂ ಶಬ್ದಗಳಿಗೂ ನಡುವೆ ಇರುವ ಸಂಬಂಧದ ಬಗ್ಗೆ ಕಲಿಯುತ್ತಾರೆ.**

ಆರಂಭದಲ್ಲಿ ಮಕ್ಕಳು ಅಕ್ಷರಗಳು ನಾವು ಮಾತನಾಡುವ ಭಾಷೆಯ ಶಬ್ದಗಳನ್ನು ಪ್ರತಿನಿಧಿಸುತ್ತವೆ ಎಂದು ತಿಳಿಯದೆ ಇರಬಹುದು. ಆದರೆ ಚಿನ್ಹೆಗೂ ಶಬ್ದಕ್ಕೂ ನಡುವೆ ಇರುವ ಸಂಬಂಧವನ್ನು ಅರ್ಥಮಾಡಿಕೊಳ್ಳುವುದು ಸಾಕ್ಷರತೆಯ ಬೆಳವಣಿಗೆಗೆ ನಿರ್ಣಾಯಕವಾದ ಅಂಶವಾಗಿದೆ ಮತ್ತು ಇದನ್ನು ಅರ್ಥಮಾಡಿಸುವ ಬಗ್ಗೆ ಮಕ್ಕಳ ಗಮನ ಸೆಳೆಯಲು ಅನೇಕ ವಿಧಾನಗಳಿವೆ. ಸೂಚನೆಗಳು ಹಾಗೂ ಅನುಭವದಿಂದ ಮಕ್ಕಳು ಈ ಸಂಬಂಧವನ್ನು ಗುರುತಿಸತೊಡಗುತ್ತಾರೆ ಮತ್ತು ಈ ತಿಳುವಳಿಕೆಯನ್ನು ಪದಗಳ ಕಾಗುಣಿತವನ್ನು ಕಲಿಯಲು ಉಪಯೋಗಿಸುತ್ತಾರೆ.

ಚಿತ್ರ 10 ತಾನೇ ಸೃಷ್ಟಿಸಿದ ಗುಣಿತಾಕ್ಷರಗಳ ಮೂಲಕ 4 ವರ್ಷದ ಮಗು ತನ್ನ ಸಂದೇಶವನ್ನು ತಿಳಿಸಿದ್ದಾನೆ– "I made orange with red and yellow", ಚಿತ್ರ ಕೃಪೆ : ಪೂರ್ವ ಅಗರ್ವಾಲ್

ಸಾಂಪ್ರದಾಯಿಕ ದೃಷ್ಟಿಯಿಂದ ಮಕ್ಕಳು ಆರಂಭದಲ್ಲಿ ಬರೆಯುವ ಪದಗಳಲ್ಲಿರುವ ಅಕ್ಷರಗಳು ಸರಿ ಇಲ್ಲದೆ ಇರಬಹುದು. ಆದರೆ ಈ ಮಕ್ಕಳೇ ಸೃಷ್ಟಿಸಿದ ಕಾಗುಣಿತವು ಮಗು ಶಬ್ದ ಮತ್ತು ಚಿನ್ಹೆಗಳ ನಡುವಿನ ಸಂಬಂಧವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದೆ ಎಂದು ತಿಳಿಯುತ್ತದೆ. ಚಿತ್ರ 10 ರಲ್ಲಿ 4 ವರ್ಷದ ಮಗುವೊಂದು 'made' ಎನ್ನುವುದಕ್ಕೆ 'MAD' ಎಂದು "orange" ಎನ್ನುವುದಕ್ಕೆ "ORANJ" ಎಂದು 'with' ಎನ್ನುವುದಕ್ಕೆ 'WID' ಎಂದು ಮತ್ತು "Yellow" ಎನ್ನುವುದಕ್ಕೆ "YELO" ಎಂದು ಬುದ್ಧಿವಂತಿಕೆಯಿಂದ ತನ್ನ ಸಂದೇಶದಲ್ಲಿ ಶಬ್ದಗಳಿಗೆ ಚಿನ್ಹೆಯ ರೂಪ ಕೊಡುವ ಪ್ರಯತ್ನ ಮಾಡಿರುವುದು ಕಂಡು ಬರುತ್ತದೆ. ಈ ರೀತಿಯ ಆರಂಭಿಕ ಹಂತದ ಪ್ರಯತ್ನಗಳನ್ನು ಮಾಡುತ್ತಿರುವಾಗ ಮಗುವನ್ನು ಹುರಿದುಂಬಿಸುವುದು ಬಹಳ ಮುಖ್ಯವಾಗುತ್ತದೆಯೇ ಹೊರತು ಅವರಿಗೆ ಸುಮ್ಮನೇ ಸರಿಯಾದ ಕಾಗುಣಿತ

ತಿಳಿಸುವುದಲ್ಲ. ಈ ರೀತಿಯ ಉತ್ತೇಜನ ಮಕ್ಕಳ ಬರವಣಿಗೆಯ ಬಗ್ಗೆ ಮೂಲಭೂತವಾಗಿ ತಿಳುವಳಿಕೆ ಸಶಕ್ತವಾಗಿ ಬೆಳೆಯಲು ಸಹಾಯವಾಗುತ್ತದೆ.

**ತರಗತಿಯಲ್ಲಿ ಉದಯೋನ್ಮುಖ ಬರವಣಿಗೆಯನ್ನು ಬೆಂಬಲಿಸುವುದು**

ಕಲಿಕೆಯ ಆರಂಭದ ಹಂತದಲ್ಲಿ (ಅದರಿಂದ ಆಚೆಗೂ ಸಹ) ಮಕ್ಕಳಿಗೆ ಸ್ವತಂತ್ರವಾಗಿ ಮತ್ತು ಪದೇ ಪದೇ ಬರೆಯಲು ಪ್ರೋತ್ಸಾಹ ನೀಡಬೇಕು. ನೀವು ಅವರಿಗೆ ಅರ್ಥಪೂರ್ಣ ಎನ್ನಿಸುವಂತಹ (ಮಕ್ಕಳಿಗೆ ಇಷ್ಟವಾಗುವಂತಹ) ವಿಷಯಗಳ ಬಗ್ಗೆ ಬರೆಯಲು ಅನೇಕ ಅವಕಾಶಗಳನ್ನು ಮಾಡಿ ಕೊಡಬೇಕು ; ಮತ್ತು ಅವರ ಬರವಣಿಗೆಯ ಪ್ರಯತ್ನಗಳನ್ನು ಪ್ರೋತ್ಸಾಹಿಸಿ ಹುರಿದುಂಬಿಸಬೇಕು. ನೀವು **8** ತರಗತಿಯಲ್ಲಿ ಉಪಯೋಗಿಸಬಹುದಾದ ಕೆಲವು ವಿಚಾರಗಳ ಬಗ್ಗೆ ಮಾತನಾಡೋಣ. ನಾವು ಈ ಚಟುವಟಿಕೆಗಳನ್ನು ಬೇರೆ ಬೇರೆ ಅಧ್ಯಾಯಗಳಲ್ಲಿ ಮಂಡಿಸಿದರೂ ಸಹ ಇವು ಓದುವುದು ಮತ್ತು ಬರೆಯುವುದು ಎರಡಕ್ಕೂ ಪ್ರಯೋಜನಕಾರಿಯಾಗಿರುತ್ತದೆ. ಏಕೆಂದರೆ ಈ ಎರಡೂ ಒಂದಕ್ಕೊಂದು ಸಂಬಂಧಪಟ್ಟಂತೆ ಬೆಳವಣಿಗೆ ಹೊಂದುತ್ತವೆ.

**ಚಿತ್ರ ಬರೆಯಲು, ಗೀಚಿದಂತೆ ಬರೆಯಲು, ಬರೆಯಲು ಮತ್ತು ಓದಲು ಅವಕಾಶ ಮಾಡಿಕೊಡುವುದು**

ಶಾಲೆಯಲ್ಲಿ ಮೊದಲನೆಯ ದಿನದಿಂದಲೇ ಮಕ್ಕಳಿಗೆ ಖಾಲಿ ಹಾಳೆ ಕೊಟ್ಟು ಬರೆಯಲು ಹೇಳಿ. ನೀವು ಅವರಿಗೆ ತಮ್ಮ ಮನೆಯ ಬಗ್ಗೆ, ಸುತ್ತಲಿನ ಪರಿಸರದ ಬಗ್ಗೆ, ತಮ್ಮ ಕುಟುಂಬದ ಬಗ್ಗೆ ಬರೆಯಲು ಹೇಳಬಹುದು. ನೀವು ಹೇಳಿರುವ ಕಥೆಗೆ ಅವರ ಪ್ರತಿಕ್ರಿಯೆಯ ಬಗ್ಗೆ ಅಥವಾ ತರಗತಿಯಲ್ಲಿನ ಅವರ ಯಾವುದಾದರೂ ಅನುಭವದ ಬಗ್ಗೆ ಕೂಡ ಬರೆಯಲು ಹೇಳಬಹುದು. ಮಕ್ಕಳು ತಮಗೆ ತೋಚಿದ್ದನ್ನು ಗೀಚಲಿ, ಅಥವಾ ಚಿತ್ರ ಬರೆಯಲಿ. ಒಮ್ಮೆ ಅವರು ಬರೆದು ಮುಗಿಸಿದ ಮೇಲೆ ಅವರು ಏನು ಬರೆದಿದ್ದಾರೆಂದು ಕೇಳಿ. ಅವರು ಹೇಳುವುದನ್ನು ಬರೆದುಕೊಳ್ಳಿ. ತರಗತಿಯಲ್ಲಿ ಅವರು ಬರೆದಿರುವುದನ್ನು ಮತ್ತು ಅದಕ್ಕೆ ನೀವು ಬರೆದಿರುವ ವಿವರಣೆಯನ್ನು ಜೊತೆಯಲ್ಲಿ ಪ್ರದರ್ಶಿಸಿ (ಚಿತ್ರ 11 ಮತ್ತು 12 ನೋಡಿ) ನೀವು ವಿವರಣೆ ಬರೆದಿರುವುದನ್ನು ಪುನಃ ಮಕ್ಕಳಿಗೆ ಓದಿ ಹೇಳಿ. ಇದರಿಂದ ನಿಮ್ಮ ವಿದ್ಯಾರ್ಥಿಗಳಿಗೆ ತಾವು ಬರೆದಿರುವುದನ್ನು ಮುಖ್ಯ ಎಂದು ಪರಿಗಣಿಸಲು ಮತ್ತು ಅದನ್ನು ಬೇರೆಯವರು ಓದಬಲ್ಲರು ಎಂದು ಅರ್ಥ ಮಾಡಿಕೊಳ್ಳಲು ಸಹಾಯ ಆಗುತ್ತದೆ.

ಚಿತ್ರ 11 ಒಂದು ಮೂರು ವರ್ಷದ ಮಗುವಿನ ಉದಯೋನ್ಮುಖ ಬರವಣಿಗೆಯ ಪ್ರಯತ್ನಗಳು ಮತ್ತು ಮಗು ತಾನು ಬರೆದಿರುವ ಬಗ್ಗೆ ಹೇಳಿದ್ದನ್ನು ಶಿಕ್ಷಕರು ವಿವರಿಸಿ ಬರೆದಿರುವುದು.
ಚಿತ್ರ ಕೃಪೆ : ಶೈಲಜ ಮೆನನ್

---

8 ನಾವು ಇಲ್ಲಿ ಕೆಲವು ಮುಖ್ಯವಾದ ವಿಚಾರಗಳನ್ನು ಮಾತ್ರ ತಿಳಿಸುತ್ತೇವೆ. ELI ಬಳಕೆದಾರರ ಕೈಪಿಡಿ ಸರಣಿಯ "ಆರಂಭಿಕ ಹಂತದಲ್ಲಿ ಮಕ್ಕಳ ಬರವಣಿಗೆಯನ್ನು ಬೆಂಬಲಿಸುವುದು" ಹೆಚ್ಚಿನ ವಿವರ ತಿಳಿಸುತ್ತದೆ.

**ತರಗತಿಯಲ್ಲಿರುವ ಮುದ್ರಣಗಳಿಗೆ ಪ್ರತಿಕ್ರಯಿಸುವುದು**

ತರಗತಿಯಲ್ಲಿನ ದೈನಂದಿನ ವಾಡಿಕೆಯಂತೆ, ಮಕ್ಕಳು ಹಾಜರಾತಿ ಚಾರ್ಟ್ (ಚಿತ್ರ 5 ನೋಡಿ) ನಲ್ಲಿ ತಮ್ಮ ಹೆಸರಿನ ಎದುರಿಗೆ ಸಹಿ ಮಾಡಬಲ್ಲರು. ಅಥವಾ ತರಗತಿಯ ಚಟುವಟಿಕೆಗಳಲ್ಲಿ ಸ್ವಯಂಸೇವಕರಾಗಿ (ಭಾಗವಹಿಸಲು) ಒಪ್ಪಿಗೆ ಪತ್ರ ನೀಡುವುದು ಅಥವಾ ಶಾಲೆಯಲ್ಲಿ ಪ್ರದರ್ಶಿಸಿರುವ **9** ಸಮೀಕ್ಷೆಗೆ ಪ್ರತಿಕ್ರಿಯೆ ನೀಡುವುದು ಇವುಗಳನ್ನು ಮಾಡಬಲ್ಲರು.

**ಮಾದರಿ ಬರವಣಿಗೆ ಮತ್ತು ಜೊತೆಗೂಡಿ ಬರೆಯುವುದು**

ನೀವು ತರಗತಿಯ ಮಕ್ಕಳ ಜೊತೆಗಿನ ಯಾವುದಾದರೂ ಅನುಭವದ ಬಗ್ಗೆ ಅಥವಾ ತರಗತಿಯ ಭೇಟಿಯ ಬಗ್ಗೆ ಮಕ್ಕಳ ಜೊತೆಗೂಡಿ ಪಠ್ಯವನ್ನು ರಚಿಸಬಹುದು. ನೀವು ಅದನ್ನು ತರಗತಿಯಲ್ಲಿ ಚಾರ್ಟ್ ಕಾಗದದ ಮೇಲೆ ಬರೆಯಬಹುದು. ಹೀಗೆ ಮಾಡುವುದರಿಂದ ನೀವು ಮಕ್ಕಳಿಗೆ ಅವರ ಅನುಭವ ಮತ್ತು ಆಲೋಚನೆಗಳನ್ನು ವಿವರಿಸಲು ಪಠ್ಯವನ್ನು ಹೇಗೆ ಬರೆಯುವುದು ಎನ್ನುವುದಕ್ಕೆ ಒಂದು ಮಾದರಿಯನ್ನು ಕಲ್ಪಿಸುತ್ತಿದ್ದೀರಿ. ಈ ರೀತಿಯ ಮಾದರಿ ಬರವಣಿಗೆಯ ಸಮಯ ಬರವಣಿಗೆಯ ರೂಪ ರೇಖೆಗಳು ಮತ್ತು ವೈಶಿಷ್ಟ್ಯತೆಗಳ ಕಡೆಗೆ ಮಕ್ಕಳ ಗಮನ ಸೆಳೆಯಲು ಒಂದು ಅತ್ಯುತ್ತಮ ಅವಕಾಶವಾಗುತ್ತದೆ. ಈ ಮಾದರಿ ಚಾರ್ಟ್‌ನ್ನು ತರಗತಿಯಲ್ಲಿ ತೂಗುಹಾಕಿ ಮತ್ತು ಅದನ್ನು ಜೊತೆಗೂಡಿ ಓದುವ ಚಟುವಟಿಕೆಗೆ ಪುನಃ ಪುನಃ ಅನೇಕ ಬಾರಿ ಉಪಯೋಗಿಸಬಹುದು. ನೀವು ಈ ರೀತಿ ಮತ್ತೆ ಮತ್ತೆ ಜೊತೆಗೂಡಿ

ಓದುವುದರಿಂದ ಮುದ್ರಣ ಹೇಗೆ ಕೆಲಸ ಮಾಡುತ್ತದೆ. ಬರೆಯುವುದು ಹೇಗೆ ಇತ್ಯಾದಿ ಅನೇಕ ವಿಷಯಗಳನ್ನು ಮಕ್ಕಳು ಕಲಿಯುತ್ತಾರೆ. ನಂತರದ ಅಭ್ಯಾಸದ ಅವಧಿಗಳಲ್ಲಿ ನೀವು ಬರೆಯುವಾಗ, ಬರವಣಿಗೆಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ಮಕ್ಕಳಿಗೆ ಪ್ರೋತ್ಸಾಹ ನೀಡಿ. ಒಂದು ಪದ ಸೇರಿಸುವುದು, ಒಂದು ನುಡಿಗಟ್ಟು ಸೇರಿಸುವುದು, ವಿರಾಮ ಚಿನ್ಹೆ ಸೇರಿಸುವುದು, ಅಥವಾ ಹೊಸ ವಾಕ್ಯವನ್ನು ಹೇಗೆ ಆರಂಭಿಸುವುದು ಇತ್ಯಾದಿಗಳನ್ನು ಮಾಡುವ ಮೂಲಕ ಬರವಣಿಗೆಗೆ ಪ್ರೋತ್ಸಾಹ ನೀಡಬಹುದು.

**ಬೇರೆ ಬೇರೆ ಪ್ರಕಾರದ ಬರವಣಿಗೆಗೆ ತೆರೆದುಕೊಳ್ಳುವುದು**

ಸಮಯ ಕಳೆದಂತೆ, ಮಕ್ಕಳಿಗೆ ವಿಸ್ತೃತ ಶ್ರೇಣಿಯ ಪುಸ್ತಕಗಳನ್ನು ಓದಿ ಹೇಳಿ ಮತ್ತು ಅವರಿಗೆ ಬೇರೆ ಬೇರೆ ಪ್ರಕಾರದಲ್ಲಿ ಬರೆಯಲು ಪ್ರೋತ್ಸಾಹಿಸಿ. ಒಂದು ದಿನ ಅವರು ತಮ್ಮ ಹಳ್ಳಿಯಲ್ಲಿ ನಡೆದ ಹಬ್ಬದ ಆಚರಣೆಯ ಬಗ್ಗೆ ವಿವರವಾಗಿ ಬರೆಯಬಹುದು. ಮತ್ತೊಂದು ದಿನ ಮಕ್ಕಳಿಗೆ ಅವರು ತಮ್ಮ ಗೆಳೆಯ/ಗೆಳತಿಯ ಬಗ್ಗೆ ಯಾವ ವಿಚಾರವನ್ನು ಇಷ್ಟಪಡುತ್ತಿರೆಂಬ ಬಗ್ಗೆ ತಿಳಿಸಿ ಪತ್ರ ಬರೆಯುವುದು ಹೇಗೆ ಎನ್ನುವುದನ್ನು ನೀವು ತಿಳಿಸಿಕೊಡಬಹುದು. ಇನ್ನೊಂದು ದಿನ ನೀವು ತರಗತಿಯಲ್ಲಿ ಅನುಸರಿಸಬೇಕಾದ ನಿಯಮಗಳ ಪಟ್ಟಿ ಬರೆಯುವುದು ಅಥವಾ ಅವರ ಮೊದಲನೆಯ ಪದ್ಯ ಬರೆಯಲು ಮಕ್ಕಳಿಗೆ ಸಹಾಯ ಮಾಡಬಹುದು. ಇದೆಲ್ಲವನ್ನೂ ಮಾಡುವಾಗ ಒಂದು ವಿಷಯ ನೆನಪಿಡಿ, ಮಕ್ಕಳ ಬರವಣಿಗೆ

---

9 **"**ತರಗತಿಯಲ್ಲಿ ಮುದ್ರಣ–ಸಮೃದ್ಧ ವಾತಾವರಣ ಸೃಷ್ಟಿಸುವುದು**"** ಕೈಪಿಡಿಯಲ್ಲಿ ಇದರ ಉದಾಹರಣೆಗಳಿವೆ.

ಸಾಂಪ್ರದಾಯಿಕ ಬರವಣಿಗೆಯಾಗಿ ಬದಲಾವಣೆ ಹೊಂದಲು ಬಹಳ ಸಮಯ ಹಿಡಿಯುತ್ತದೆ. ಮಕ್ಕಳಿಗೆ ಗೀಚಲು, ಚಿತ್ರ ಬಿಡಿಸಲು ಮತ್ತು ಬರೆಯುತ್ತಾ ಮಾತನಾಡಲು ಅವಕಾಶ ಮಾಡಿಕೊಡಿ. ಅವರು ತಮಗೆ ತೋಚಿದಂತೆ ಕಾಗುಣಿತ ಉಪಯೋಗಿಸಲು ಬಿಡಿ. ಅವರ ಬರವಣಿಗೆ ನಿಮ್ಮ ಬರವಣಿಗೆಯಂತೆ ಇರಬೇಕೆಂದು ನಿರೀಕ್ಷಿಸಬೇಡಿ. ಈ ಎಲ್ಲಾ ಚಟುವಟಿಕೆಗಲಲ್ಲಿ ಮಕ್ಕಳಿಗೆ ಅವಶ್ಯಕತೆ ಇರುವ ಸಹಾಯ ಮಾಡಿ ಬೆಂಬಲ ಕೊಡಿ.

ಚಿತ್ರ 12 ತಾವು ಬರೆದಿರುವ ಬಗ್ಗೆ ಮಕ್ಕಳು ನೀಡಿದ ವಿವರಣೆಯನ್ನು ಶಿಕ್ಷಕರು ಬರೆದು ಪ್ರದರ್ಶಿಸಿರುವ ಇನ್ನೊಂದು ಉದಾಹರಣೆ. ಕಮಲಾ ನಿಂಬಾಕರ್ ಬಾಲಭವನ, ಪ್ರಗತಿ ಶಿಕ್ಷಣ ಸಂಸ್ಥೆ, ಫಲಟನ್, ಮಹಾರಾಷ್ಟ್ರ

**ವಿವಿಧ ರೀತಿಯ ವಸ್ತುಗಳನ್ನು ಉಪಯೋಗಿಸಿ ಅಕ್ಷರಗಳನ್ನು ಕಲಿಸುವುದು**

ಕ್ರಮೇಣವಾಗಿ ಮಕ್ಕಳು ಲಿಪಿಯನ್ನು ಕಲಿತ ಹಾಗೆ, ನೀವೂ ಬೇರೆ ಬೇರೆ ಚಟುವಟಿಕೆಗಳು ಮತ್ತು ವಿವಿಧ ರೀತಿಯ ವಸ್ತುಗಳನ್ನು ಉಪಯೋಗಿಸಿ ಮಕ್ಕಳಿಗೆ ಅಕ್ಷರದ ಆಕಾರದ ಚಿನ್ಹೆಗಳನ್ನು ಕಲಿಸಬಹುದು. ನೀವು ಅವರಿಗೆ ಬೆರಳಿನಿಂದ ಮಣ್ಣಿನಲ್ಲಿ, ಮರಳಿನ ಮೇಲೆ, ನೀರಿನಲ್ಲಿ, ಗಾಳಿಯಲ್ಲಿ ಅಕ್ಷರದ ಆಕಾರವನ್ನು ಬರೆಯುವಂತೆ ಮಾಡಬಹುದು. ಅಥವಾ ಚಿಕ್ಕ ಕಲ್ಲುಗಳು, ಕಡಲೆ ಕಾಯಿಯ ಸಿಪ್ಪೆ ಇತ್ಯಾದಿ ವಸ್ತುಗಳನ್ನು ಅಕ್ಷರದ ಆಕಾರದಲ್ಲಿ ಜೋಡಿಸಲು ಮಕ್ಕಳಿಗೆ ಸಹಾಯ ಮಾಡಬಹುದು. ಬರೆಯುವ ಇತರೆ ಸಾಮಗ್ರಿಗಳ ಜೊತೆಗೆ ಈ ವಸ್ತುಗಳನ್ನೂ ತರಗತಿಯ ಬರೆಯುವ ಕೋಣೆಯಲ್ಲಿ ಕೈಗೆಟಕುವಂತೆ ಇಡಬಹುದು.

**ಬರವಣಿಗೆಯ ಬಗ್ಗೆ ಮಾತನಾಡುವುದು :** ಪ್ರಾರಂಭದಿಂದಲೂ ಮಕ್ಕಳನ್ನು ಅವರು ಏನನ್ನು ಬರೆದಿದ್ದಾರೆ ಅಥವಾ ಬರೆಯುತ್ತಿದ್ದಾರೆ ಎನ್ನುವ ಬಗ್ಗೆ ಸಂಭಾಷಣೆಯಲ್ಲಿ ತೊಡಗಿಸಿರಿ. ಮಗು ತಾನು ಏನನ್ನು ಬರೆದಿದ್ದೇನೆ/ಬರೆಯುತ್ತಿದ್ದೇನೆಂದು ಹೇಳುತ್ತಿದೆಯೋ ಅದರ ಒಂದು ಭಾಗವನ್ನು ಮಾತ್ರ ಬರೆದಿದ್ದರೆ, ಮಗು ವಿವರಿಸುತ್ತಿರುವಾಗ ನೀವು ಅದನ್ನು ಬರೆದುಕೊಳ್ಳಬಹುದು.

**ಮಗುವಿನ ಕೈ ಕೆಲಸವನ್ನು ಹಂಚಿಕೊಳ್ಳುವುದು/ಪ್ರದರ್ಶಿಸುವುದು**

ಮಗು ತಾನು ಬರೆದಿರುವುದನ್ನು (ಕೈಕೆಲಸ) ಬೇರೆ ಮಕ್ಕಳೊಂದಿಗೆ ಹಂಚಿಕೊಳ್ಳಲು ಮತ್ತು ಪ್ರದರ್ಶಿಸಲು ಬೇರೆ ಬೇರೆ ವಿಧಾನವನ್ನು ಸಂಯೋಜನೆ ಮಾಡಿ. ಇವುಗಳನ್ನು ತೂಗು ಹಾಕಬಹುದು, ಅಥವಾ ಮಗುವನ್ನು ಕರೆದು ತಾನು ಬರೆದಿರುವುದನ್ನು ಸಹಪಾಠಿಗಳಿಗೆ ತೋರಿಸಿ ಅದರ ಬಗ್ಗೆ ಮಾತನಾಡುವಂತೆ ಹೇಳಬಹುದು. ಅದನ್ನು ಮಗುವಿನ ತಾಯ್ತಂದೆಯರಿಗೆ ತೋರಿಸಬಹುದು. ಪ್ರದರ್ಶನ ಏರ್ಪಡಿಸಿ ಎಲ್ಲ ಜನರೊಡನೆ ಹಂಚಿಕೊಳ್ಳಬಹುದು. ಈ ರೀತಿ ಇನ್ನೂ ಅನೇಕ ರೀತಿಯಿಂದ ಮಗುವಿನ ಕೆಲಸವನ್ನು ಪ್ರದರ್ಶಿಸಬಹುದು.

**ಬರವಣಿಗೆಯ ಕಡತಗಳನ್ನು (ಪೋಲ್ಡರ್ಸ್) ಮಾಡಿ ಒಪ್ಪಮಾಡುವುದು**

ಪ್ರತಿ ಮಗುವಿಗೂ ಅದರ ಬರವಣಿಗೆಯನ್ನು ಒಪ್ಪವಾಗಿಡಲು ಒಂದು ಕಡತ (ಪೋಲ್ಡರ್) ಮಾಡಿ ಇಡುವುದು ಉತ್ತಮ. ಅದರಲ್ಲಿ ಮಗು ವರ್ಷಗಳಲ್ಲಿ ಬರೆದಿರುವ ಎಲ್ಲವನ್ನೂ ಒಪ್ಪವಾಗಿ ಜೋಡಿಸಿ ಇಡಬಹುದು. ಇದು ಒಂದು ದಾಖಲೆಯಾಗಿ, ಮಗುವಿನ ತಾಯಿ ತಂದೆಯರಿಗೆ ತೋರಿಸಲು ಮತ್ತು ಮಗುವಿನ ಕಲಿಕೆಯ ಪಥವನ್ನು ಗಮನಿಸಲು ಸಹಾಯ ಮಾಡುತ್ತದೆ.

**ಕೊನೆಯ ಮಾತು (ಸಮಾರೋಪ)**

ಕೊನೆಯ ಹಂತದಲ್ಲಿ ನಾವು ಉದಯೋನ್ಮುಖ ಸಾಕ್ಷರತೆಯ ದೃಷ್ಟಿಕೋನದ ಕಲ್ಪಿತ ನಂಬಿಕೆಗಳನ್ನು ಪುನಃ ಪರಿಶೀಲಿಸಬೇಕು. ಮಕ್ಕಳು ಅತಿ ಚಿಕ್ಕ ವಯಸ್ಸಿನಿಂದಲೇ ತಮ್ಮ ಪರಿಸರದ ಪ್ರಭಾವದಿಂದ ಮುದ್ರಣದ ಬಗ್ಗೆ ಕಲಿಯುತ್ತಾರೆ ಎನ್ನುವುದು ಒಪ್ಪತಕ್ಕ ವಿಚಾರವಾಗಿದೆ. ಆದರೆ ಈ ಕಲಿಕೆ ಆಗಬೇಕಾದರೆ ಮಕ್ಕಳು ಮುದ್ರಣದೊಟ್ಟಿಗೆ ಅರ್ಥಪೂರ್ಣವಾದ ಚಟುವಟಿಕೆಯಲ್ಲಿ ತೊಡಗಿರಬೇಕು ಮತ್ತು ಕಲಿಕೆಗೆ ಪೂರಕವಾದ ಬೆಂಬಲ ನೀಡುವ ಇತರರೊಂದಿಗೆ ನಡೆಸುವ ಅರ್ಥಪೂರ್ಣ ಸಂವಹನ, ಈ ಎಲ್ಲವೂ ಇರಬೇಕು.

ಮಧ್ಯಮ ವರ್ಗದ ಕುಟುಂಬಗಳಲ್ಲಿ ಈ ರೀತಿಯ ಮುದ್ರಣದೊಂದಿಗೆ ತೊಡಗಿಸಿಕೊಳ್ಳುವ ಅವಕಾಶ ಮಕ್ಕಳಿಗೆ ಶಾಲೆಗೆ ಸೇರುವ ಮೊದಲೇ ದೊರೆಯುತ್ತದೆ. ಈ ಸನ್ನಿವೇಶದಿಂದ ಬಂದ ಮಕ್ಕಳಿಗೂ ಸಹ ಅವರ ಉದಯೋನ್ಮುಖ ಸಾಕ್ಷರತೆಗೆ ತರಗತಿಯಲ್ಲಿ ಬೆಂಬಲ ನೀಡುವುದನ್ನು ಮುಂದುವರೆಸುವುದು ಬಹಳ ಮುಖ್ಯವಾಗುತ್ತದೆ. ಕಡಿಮೆ ಸಾಕ್ಷರತೆ ಇರುವ ಕುಟುಂಬಗಳಿಂದ ಬಂದ ಮಕ್ಕಳಿಗೆ ತರಗತಿಯಲ್ಲಿ ಕಲಿಕೆಗೆ ಕಲ್ಪಿಸುವ ಸನ್ನಿವೇಶಗಳು ತುರ್ತು ಮತ್ತು ನಿರ್ಣಾಯಕ ಅವಶ್ಯಕತೆಯಾಗಿರುತ್ತದೆ. ಕಲಿಕೆಗೆ ಪೂರಕವಾದ ಸನ್ನಿವೇಶದಲ್ಲಿ  ಕಲಿಕೆಯ ಬಗ್ಗೆ ಸರಿಯಾದ ದೃಷ್ಟಿ ಬೆಳೆಸಿಕೊಳ್ಳಲು, ಸಾಂಪ್ರದಾಯಿಕವಾದ ಓದು ಮತ್ತು ಬರಹ ಕಲಿಯಲು ಬೇಕಾದ ತಿಳುವಳಿಕೆ ಮತ್ತು ಕೌಶಲ್ಯ ಕಲಿಸಲು ಶಾಲೆಯ ಪಾತ್ರ ಮಹತ್ವಪೂರ್ಣವಾಗಿರುತ್ತದೆ.

ಈ ಕೈಪಿಡಿಯಲ್ಲಿ ಮಕ್ಕಳಿಗೆ ಕಲಿಕೆಗೆ ಪೂರಕವಾದ ಸನ್ನಿವೇಶ ರಚಿಸಲು ಮೂರು ಮಾರ್ಗೋಪಾಯಗಳನ್ನು ಸುಚಿಸಲಾಗಿದೆ – ಅರ್ಥಪೂರ್ಣವಾದ ಮುದ್ರಣ ಸಮೃದ್ಧ ವಾತಾವರಣ ಇರುವಂತೆ ಮಾಡುವುದು, ಉದಯೋನ್ಮುಖ ಓದುವಿಕೆಗೆ ಅವಕಾಶ ಮಾಡುವುದು ಮತ್ತು ಉದಯೋನ್ಮುಖ ಬರವಣಿಗೆಗೆ ಅವಕಾಶ ಮಾಡಿಕೊಡುವುದು. ಇದರಿಂದ ಒಂದು ಸಶಕ್ತವಾದ ಉದಯೋನ್ಮುಖ ಸಾಕ್ಷರತೆಯ ತರಗತಿಯನ್ನು ತಯಾರು ಮಾಡಲು ಸಾಧ್ಯ. ನೀವು ಇಲ್ಲಿ ತಿಳಿಸಿರುವ ವಿಷಯಗಳ ಉಪಯೋಗದಿಂದ ಉದಯೋನ್ಮುಖ ಸಾಕ್ಷರತೆಯ ಪಠ್ಯಕ್ರಮವನ್ನು ಅಭಿವೃದ್ಧಿ ಪಡಿಸಲು ಸಾಧ್ಯವಾಗುತ್ತದೆ ಎಂದು ನಂಬಿದ್ದೇವೆ.